KA / BG-GPO / 2515 / WPP-47 / 2009-2011



# ಕರ್ನಾಟಕ ರಾಜ್ಯಪತ್ರ

**ಅಧಿಕೃತವಾಗಿ ಪ್ರಕಟಿಸಲಾದುದು**



| ಸಂಪುಟ ೧೪೪ | ಬೆಂಗಳೂರು, ಗುರುವಾರ ಜನವರಿ ೨೯, ೨೦೦೯ (ಮಾಘ ೯, ಶಕ ವರ್ಷ ೧೯೩೦) | ಸಂಚಿಕೆ ೫ |
|---|---|---|



## ಭಾಗ – ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾದ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

**ವಸತಿ ಸಚಿವಾಲಯ**

**ವಿಷಯ :** 100 ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ವಇ 178 ಕಗೃಮಂ 2000, ದಿನಾಂಕ 25–1–2001.
2. ಸರ್ಕಾರದ ಆದೇಶ ಸಂಖ್ಯೆ: ವಇ 178 ಕಗೃಮಂ 2000, ದಿನಾಂಕ 3–4–2002.
3. ಆಯುಕ್ತರು, ಕರ್ನಾಟಕ ಗೃಹ ಮಂಡಳಿ ಅವರ ಪತ್ರ ಸಂಖ್ಯೆ: ಕಗೃಮಂ/ಮುಅ/100ವಯೋ/ಅನುಮೋದನೆ/2007–08, ದಿನಾಂಕ 13–9–2007.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮಾಂಕ (1)ರ ಆದೇಶದಲ್ಲಿ ಸುಮಾರು 13500 ಮನೆಗಳು ಹಾಗೂ 15000 ನಿವೇಶನಗಳನ್ನು ಒಳಗೊಂಡ 100 ವಸತಿ ಯೋಜನೆಯನ್ನು ಒಟ್ಟು 850 ಕೋಟಿ ರೂಗಳ ಯೋಜನಾ ವೆಚ್ಚದಲ್ಲಿ ಕರ್ನಾಟಕ ಗೃಹ ಮಂಡಳಿ ಕಾಯ್ದೆ 1962ರ ಸೆಕ್ಷನ್ 20 ರಡಿಯಲ್ಲಿ ಕಾರ್ಯಗತಗೊಳಿಸಲು ಸರ್ಕಾರದ ಮಂಜೂರಾತಿ ನೀಡಲಾಗಿರುತ್ತದೆ. ಓದಲಾದ ಕ್ರಮಾಂಕ (2)ರ ಆದೇಶದಲ್ಲಿ ಕರ್ನಾಟಕ ಗೃಹ ಮಂಡಳಿ ಕಾಯ್ದೆ 1962ರ ಸೆಕ್ಷನ್ 15 ರಡಿಯಲ್ಲಿ 100 ವಸತಿ ಯೋಜನೆಯನ್ನು ದಿನಾಂಕ: 25–1–2001ರ ಆದೇಶದಲ್ಲಿ ಪ್ರತಿಯೊಂದು ಪ್ರಸ್ತಾವಕ್ಕೆ ನಿಗದಿಪಡಿಸಿರುವ ಯೋಜನಾ ವೆಚ್ಚಕ್ಕೆ ಮೀರದಂತೆ ಕಾರ್ಯಗತಗೊಳಿಸಲು ಆದೇಶಿಸಲಾಗಿರುತ್ತದೆ.

ಓದಲಾದ ಕ್ರಮಾಂಕ–3ರ ಪತ್ರದಲ್ಲಿ 100 ವಸತಿ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಮಯದಲ್ಲಿ ಯೋಜನೆಯಡಿ ಅನುಮೋದನೆಗೊಂಡ ಕೆಲವು ಯೋಜನೆಗಳನ್ನು ಭೂಮಿಯ ಲಭ್ಯತೆ ಇಲ್ಲದ ಕಾರಣ, ಮತ್ತೆ ಕೆಲವು ಯೋಜನೆಗಳನ್ನು ಸೂಕ್ತವಲ್ಲದ ಭೂಲಭ್ಯತೆಯಿಂದಾಗಿ ಕೈಗೆತ್ತಿಕೊಂಡಿರುವುದಿಲ್ಲವೆಂದು ಆಯುಕ್ತರು ತಿಳಿಸಿದ್ದಾರೆ. ಅನುಮೋದಿತ ಸ್ಥಳಗಳ ಒಟ್ಟು 53 ಯೋಜನೆಗಳಿಗೆ 267.48 ಕೋಟಿ ರೂಗಳಲ್ಲಿ ಕಾಮಗಾರಿಯನ್ನು ನಿರ್ವಹಿಸಿರುವುದಾಗಿ, ದಿನಾಂಕ 25–1–2001ರ ಆದೇಶದಲ್ಲಿ ಇಲ್ಲದಿರುವ, ಆದರೆ ಪ್ರತ್ಯೇಕವಾಗಿ ಅನುಮೋದನೆ ಪಡೆದ 29 ಯೋಜನೆಗಳ ಮೊತ್ತ ರೂ. 296–07 ಗಳಾಗಿದ್ದು ಒಟ್ಟಾರೆ 563.55 ಕೋಟಿ ರೂಗಳ ಕಾಮಗಾರಿಗಳನ್ನು ನಿರ್ವಹಿಸಿರುವುದಾಗಿ, ಉಳಿದ 18 ಯೋಜನೆಗಳನ್ನು ರೂ. 286.45 ಕೋಟಿ ವೆಚ್ಚದಲ್ಲಿ ಅನುಷ್ಠಾನಗೊಳಿಸಬಹುದಾಗಿ ತಿಳಿಸುತ್ತಾ ಕೆಳಕಂಡ 05 ಯೋಜನೆಗಳಿಗೆ ಆಡಳಿತಾತ್ಮಕ ಅನುಮೋದನೆ ನೀಡುವಂತೆ ಕೋರಿದ್ದಾರೆ.

ಅ) ಮುರುಕುಂಬಿ, ಬೈಲಹೊಂಗಲ ಬೆಳಗಾಂ ಜಿಲ್ಲೆ
ಆ) ಹಳ್ಳದ ಕೇರಿ ಬೀದರ್ ಜಿಲ್ಲೆ
ಇ) ತೆಕ್ಕಲಕೋಟೆ ಬಳ್ಳಾರಿ ಜಿಲ್ಲೆ
ಈ) ಕರಟಗಿ ಬಳ್ಳಾರಿ ಜಿಲ್ಲೆ
ಉ) ಜಕ್ಕರೆಹೊಂಡ ಬೆಳಗಾಂ ಜಿಲ್ಲೆ

ಆಯುಕ್ತರ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸದೆ ಹಾಗೂ ಈ ಯೋಜನೆಗಳಿಗೆ ಅನುಮೋದನೆ ನೀಡಲು ತೀರ್ಮಾನಿಸಿರುತ್ತದೆ. ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ವಇ 94 ಕಗೃಮಂ 2002 ಬೆಂಗಳೂರು, ದಿನಾಂಕ: 20ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 100 ವಸತಿ ಯೋಜನೆಯಡಿ ಕರ್ನಾಟಕ ಗೃಹ ಮಂಡಳಿಯು ವಸತಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಈ ಕೆಳಕಂಡವುಗಳಿಗೆ ಸರ್ಕಾರವು ಅನುಮತಿ ನೀಡಿ ಆದೇಶಿಸಿದೆ.

1) ಪ್ರತ್ಯೇಕವಾಗಿ ಅನುಮೋದನೆ ಪಡೆದು ಹೊಸ ಸ್ಥಳಗಳಲ್ಲಿ ಪೂರ್ಣಗೊಂಡಿರುವ/ರೂಪುಗೊಳ್ಳುತ್ತಿರುವ 29 ಯೋಜನೆಗಳಿಗೆ (ಅನುಬಂಧ) ಘಟನೋತ್ತರ ಅನುಮತಿ.
2) ಈ ಮುಂದೆ ಕಾಣಿಸಿದ ಐದು ಸ್ಥಳಗಳಲ್ಲಿ ಯೋಜನೆಗಳನ್ನು ಕೈಗೆತ್ತಿಕೊಳ್ಳಲು ಅನುಮೋದನೆ.
   ಅ) ಮುರುಕುಂಬಿ, ಬೈಲಹೊಂಗಲ ಬೆಳಗಾಂ ಜಿಲ್ಲೆ
   ಆ) ಹಳ್ಳದ ಕೇರಿ ಬೀದರ್ ಜಿಲ್ಲೆ
   ಇ) ತೆಕ್ಕಲಕೋಟೆ ಬಳ್ಳಾರಿ ಜಿಲ್ಲೆ
   ಈ) ಕರಟಗಿ ಬಳ್ಳಾರಿ ಜಿಲ್ಲೆ
   ಉ) ಜಕ್ಕರೆಹೊಂಡ ಬೆಳಗಾಂ ಜಿಲ್ಲೆ
3) ಕಳಪೆ ಬೇಡಿಕೆ/ಭೂಮಿ ಲಭ್ಯತೆ ಇಲ್ಲದಿರುವ ಕಾರಣಗಳಿಂದ ಕೈಗೆತ್ತಿಕೊಳ್ಳದಿರುವ 13 ಯೋಜನೆಗಳ ಅಥವಾ ಮೇಲ್ಕಂಡ ಕ್ರಮ ಸಂಖ್ಯೆ –02ರಲ್ಲಿರುವ 05 ಯೋಜನೆಗಳಿಗೆ ಪರ್ಯಾಯ ಸ್ಥಳಗಳಲ್ಲಿ ಯೋಜನೆಗಳನ್ನು ಕೈಗೆತ್ತಿಕೊಳ್ಳಲು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ಪಾರ್ವತಿ**
ಪೀಠಾಧಿಕಾರಿ–3, ವಸತಿ ಇಲಾಖೆ

**ಅನುಬಂಧ**

| Sl. No. | Place | Name of the District | Extent of Land in acres | Total No. of plots | No. of Sites | No. of Houses | Project Cost Rs. In lakhs |
|---|---|---|---|---|---|---|---|
| 1 | 2 | 3 | 4 | 5 | 6 | 7 | 8 |
| | **PROJECTS COMPLETED** | | | | | | |
| 1 | Gopishetty koppa | Shimoga | 61.38 | 621 | 474 | 147 | 1524.00 |
| 2 | Lingsugur | Raichur | 7.1 | 85 | 39 | 46 | 200.00 |
| 3 | Sattur layout | Dharwad | | 4 | 0 | 4 | 259.00 |
| 4 | Gamangatti | Dharwad | 68.17 | 805 | 783 | 22 | 951.78 |
| 5 | Amargol | Dharwad | 22.57 | 248 | 248 | 0 | 365.69 |
| 6 | D.N. Koppa | Dharwad | 54.475 | 580 | 580 | 0 | 636.14 |
| 7 | Landakanahalli | Uttara Kannada | 16.70 | 179 | 154 | 25 | 402.00 |
| 8 | Gadag (Revenue Employee) | Gadag | 23.27 | 348 | 60 | 288 | 1904.00 |

| Sl. No. | Place | Name of the District | Extent of Land in acres | Total No. of plots | No. of Sites | No. of Houses | Project Cost Rs. In lakhs |
|---|---|---|---|---|---|---|---|
| 9 | Gadag-NWKRTC | Gadag | 13.8 | 270 | 7 | 263 | 1050.00 |
| 10 | Hulikoti | Gadag | 15.00 | 220 | 138 | 82 | 474.00 |
| 11 | Hebri | Udapi | 0.833 | 15 | 0 | 15 | 70.00 |
| 12 | Indi | Bijapur | 11 | 129 | 117 | 12 | 122.36 |
| 13 | Muddebihal | Bijapur | 33.2 | 356 | 96 | 260 | 1665.50 |
| 14 | Ittangihal, Bijapura | Bijapur | 60.00 | 780 | 705 | 75 | 1200.23 |
| 15 | Kanabargi | Belgaum | | - | - | 121 | 420.00 |
| 16 | Yadgir | Gulbarga | 14.40 | 136 | 121 | 15 | 317.80 |
| 17 | Kampli | Bellary | 19.08 | 273 | 203 | 70 | 739.45 |
| | | | **Total** | **5049** | **3725** | **1445** | **12301.95** |
| | **Under Progress** | | | | | | |
| 18 | Lakkamanahalli Phase-II | Dharwad | 35.00 | 371 | 321 | 50 | 1000.00 |
| 19 | Basavana Bagewadi | Bijapur | 10.00 | 144 | 134 | 10 | 200.00 |
| 20 | Nalatwad, Muddebihal | Bijapur | 6.07 | 72 | 56 | 16 | 150.00 |
| 21 | Sindhagi | Bijapur | 20.00 | 307 | 295 | 12 | 240.00 |
| 22 | Kanabargi | Belgaum | 38 | 547 | 543 | 4 | 457.60 |
| 23 | Chikkodi | Belgaum | 11.00 | 150 | 145 | 5 | 120.00 |
| 24 | Hindalaga | Belgaum | 7.60 | 104 | 74 | 30 | 459.98 |
| 25 | Gulbarga (Air port land) | Gulbarga | 148.50 | 1540 | 1237 | 303 | 5700.00 |
| 26 | Kottur-Kudligi | Bellary | 8.16 | 112 | 87 | 25 | 305.50 |
| 27 | HB halli | Bellary | 10.80 | 135 | 120 | 15 | 271.50 |
| 28 | Gangavathi | Koppal | 9.21 | 121 | 71 | 50 | 454.70 |
| 29 | Channapatna-Hassa | Hassan | 153.00 | 2167 | 1867 | 300 | 8300.00 |
| | | **Total** | | **5770** | **4950** | **820** | **17659.28** |
| | | **Grand Total** | | **10819** | **8675** | **2265** | **29961.23** |

**ಎನ್. ಪಾರ್ವತಿ**

ಪಿ.ಆರ್.1234 ಪೀಠಾಧಿಕಾರಿ–3, ವಸತಿ ಇಲಾಖೆ

## ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ

**ವಿಷಯ :** ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಜವಳಿ ತನಿಖಾಧಿಕಾರಿ ವೃಂದದಿಂದ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ಪೂರ್ವಾನ್ವಯವಾಗಿ ಬಡ್ತಿ ನೀಡುವ ಕುರಿತು.

**ಓದಲಾಗಿದೆ:** 1. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ/03/ಜಕೈಸೇ/2006, ದಿ: 28–2–2008.

2. ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ತನಿಖಾಧಿಕಾರಿ ವೃಂದದಿಂದ ಜವಳಿ ಪ್ರವರ್ಧನಾಧಿಕಾರಿ ವೃಂದದ ದಿನಾಂಕ 14–5–2007ರ ಇಲಾಖಾ ಬಡ್ತಿ ಸಮಿತಿ ಸಭೆಯ ನಡವಳಿ.

3. ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1127/ವೆಚ್ಚ.1/2007, ದಿ: 27–7–2007.
4. ಕರ್ನಾಟಕ ಲೋಕ ಸೇವಾ ಆಯೋಗ ಪತ್ರ ಸಂಖ್ಯೆ: PSC/197/CNS 07, ದಿ: 1–8–2008.
5. ಸರ್ಕಾರದ ಅಧಿಸೂಚನೆ ಸಂಖ್ಯೆ: ವಾಕೈ/24/ಜಕೈಸೇ/2002, ದಿ: 3–1–2003.
6. ಕೈಮಗ್ಗ ಮತ್ತು ಜವಳಿ ಇಲಾಖೆಯ ಜವಳಿ ತನಿಖಾಧಿಕಾರಿ ವೃಂದದಿಂದ ಜವಳಿ ಪ್ರವರ್ಧನಾಧಿಕಾರಿ ವೃಂದದ ದಿನಾಂಕ 30–8–2002ರ ಇಲಾಖಾ ಬಡ್ತಿ ಸಮಿತಿ ಸಭೆಯ ನಡವಳಿ.
7. ಜವಳಿ ಅಭಿವೃದ್ಧಿ ಆಯುಕ್ತರು ಕೈಮಗ್ಗ ಮತ್ತು ಜವಳಿ ಇಲಾಖೆ ಇವರ ಪತ್ರ ಸಂಖ್ಯೆ: ಕೈಜಇ/ಆಡಳಿತ/ಸಿ–4/43/ಮುಂ.ಬ/2005–06, ದಿನಾಂಕ 26–5–2006.

**ಪ್ರಸ್ತಾವನೆ :**

1) ಮೇಲೆ ಓದಲಾದ (1)ರ ಸರ್ಕಾರದ ಅಧಿಸೂಚನೆಯಲ್ಲಿ ಕೈಮಗ್ಗ ಮತ್ತು ಜವಳಿ ಇಲಾಖೆಯ 10 ಜವಳಿ ತನಿಖಾಧಿಕಾರಿಗಳಿಗೆ ಜವಳಿ ಪ್ರವರ್ಧನಾಧಿಕಾರಿಗಳ ಹುದ್ದೆಗೆ ಸ್ಥಾನಪನ್ನ ಆಧಾರದ ಮೇಲೆ ಬಡ್ತಿ ನೀಡಲಾಗಿರುತ್ತದೆ. ಸದರಿ ಅಧಿಸೂಚನೆಯಲ್ಲಿ ಕ್ರಮ ಸಂಖ್ಯೆ (1) ಮತ್ತು (3) ರವರೆಗಿನ ಈ ಕೆಳಕಂಡ 3 ಅಧಿಕಾರಿಗಳಿಗೆ ಮೇಲೆ ಓದಲಾದ (2)ರ ಇಲಾಖಾ ಬಡ್ತಿ ಸಮಿತಿಯ ನಡವಳಿ ಹಾಗೂ ಮೇಲೆ ಓದಲಾದ (5)ರ ಅಧಿಸೂಚನೆಯನ್ವಯದಲ್ಲಿ ನಿಯಮ–32 ರಲ್ಲಿ ಸ್ವತಂತ್ರ ಪ್ರಭಾರದ ಜವಳಿ ಪ್ರವರ್ಧನಾಧಿಕಾರಿಗಳ ಹುದ್ದೆಯಲ್ಲಿ ದಿನಾಂಕ 3–1–2003 ರಿಂದ ಕಾರ್ಯನಿರ್ವಹಿಸುತ್ತಿರುವುದರಿಂದ ಇವರುಗಳಿಗೆ ಸದರಿ ದಿನಾಂಕದಿಂದ ಪೂರ್ವಾನ್ವಯವಾಗಿ ಬಡ್ತಿಗೆ ಪರಿಗಣಿಸಲು ತೀರ್ಮಾನಿಸಿರುತ್ತದೆ.

1. ಗಂಗಯ್ಯ
2. ಸಫಾರೆ ಶ್ರೀನಿವಾಸ್ ಮತ್ತು
3. ಜನಾರ್ಧನ

2) ಈ ಕುರಿತು ಸಮಗ್ರ ಪ್ರಸ್ತಾವನೆಯನ್ನು ಕರ್ನಾಟಕ ಲೋಕಸೇವಾ ಆಯೋಗದ ಸಹಮತಿಗಾಗಿ ಕಳುಹಿಸಲಾಗಿತ್ತು. ಮೇಲೆ ಓದಲಾದ (4)ರ ಪತ್ರದಲ್ಲಿ ಆಯೋಗವು ಶ್ರೀ ಗಂಗಯ್ಯ, ಶ್ರೀ ಸಫಾರೆ ಶ್ರೀನಿವಾಸ್ ಮತ್ತು ಶ್ರೀ ಜನಾರ್ಧನ ಇವರುಗಳಿಗೆ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ದಿನಾಂಕ 3–1–2003ರಿಂದಲೇ ಪೂರ್ವಾನ್ವಯವಾಗಿ ಬಡ್ತಿ ನೀಡಲು ಸಹಮತಿ ನೀಡಿರುತ್ತದೆ.

3) ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ ನಂತರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ/03/ಜಕೈಸೇ/2006, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2008.**

4) ಕೈಮಗ್ಗ ಮತ್ತು ಜವಳಿ ಇಲಾಖೆಯಲ್ಲಿ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32 ರಡಿಯಲ್ಲಿ ಸ್ವತಂತ್ರ ಪ್ರಭಾರದಲ್ಲಿ ಜವಳಿ ಪ್ರವರ್ಧನಾಧಿಕಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದ ಈ ಕೆಳಕಂಡ 3 ಜವಳಿ ಪ್ರವರ್ಧನಾಧಿಕಾರಿಗಳಿಗೆ ಅವರ ಹೆಸರುಗಳ ಮುಂದೆ ನಮೂದಿಸಿರುವಂತೆ, ಅವರನ್ನು ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳ ನಿಯಮ–32ರಡಿ ಜವಳಿ ಪ್ರವರ್ಧನಾಧಿಕಾರಿಯ ಹುದ್ದೆಯಲ್ಲಿ ಸ್ವತಂತ್ರ ಪ್ರಭಾರದಲ್ಲಿರಿಸಿದ ದಿನಾಂಕದಿಂದ ಜಾರಿಗೆ ಬರುವಂತೆ ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.) ನಿಯಮಾವಳಿ 1978 ನಿಯಮ 2(3)ರ ಅನುಸಾರ ಜವಳಿ ಪ್ರವರ್ಧನಾಧಿಕಾರಿಯ ಹುದ್ದೆಗೆ ಪೂರ್ವಾನ್ವಯವಾಗಿ ಪದೋನ್ನತಿಗೆ ಪರಿಗಣಿಸಿ ಮುಂಬಡ್ತಿ ನೀಡಲಾಗಿದೆ. ಅದರಂತೆಯೇ ಪ್ರಸ್ತಾಪಿತ ಅಧಿಕಾರಿಗಳು ತತ್ಸಂಬಂಧ ಆರ್ಥಿಕ ಸೌಲಭ್ಯಗಳನ್ನೂ ಸಹ ಸದರಿ ದಿನಾಂಕದಿಂದ ಪಡೆಯಲು ಅರ್ಹರಿರುತ್ತಾರೆ.

| ಕ್ರಮ ಸಂಖ್ಯೆ | ಅಧಿಕಾರಿಗಳ ಹೆಸರು (ಶ್ರೀಯುತರುಗಳು) | ಕರ್ನಾಟಕ ನಾಗರೀಕ ಸೇವೆಗಳು (ಆರ್.ಪಿ.ಪಿ.) 1978ರ ನಿಯಮ 2(3) ರನ್ವಯ ಜವಳಿ ಪ್ರವರ್ಧನಾಧಿಕಾರಿ ಹುದ್ದೆಗೆ ಪೂರ್ವಾನ್ವಯ ಮುಂಬಡ್ತಿಗೆ ಪರಿಗಣಿಸಿದ ಅವಧಿ |
|---|---|---|
| 1 | ಗಂಗಯ್ಯ | ದಿನಾಂಕ 3–1–2003 ರಿಂದ 28–2–2008 |
| 2 | ಸಫಾರೆ ಶ್ರೀನಿವಾಸ | ದಿನಾಂಕ 3–1–2003 ರಿಂದ 28–2–2008 |
| 3 | ಜನಾರ್ಧನ | ದಿನಾಂಕ 3–1–2003 ರಿಂದ 28–2–2008 |

5) ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ/1127/ವೆಚ್ಚ–1/2007, ದಿನಾಂಕ 27–7–2007 ರಲ್ಲಿ ನೀಡಲಾದ ಸಹಮತಿಯ ಮೇರೆಗೆ ಮತ್ತು ಕರ್ನಾಟಕ ಲೋಕಸೇವಾ ಆಯೋಗ ಪತ್ರ ಸಂಖ್ಯೆ: PSC/197/CNS07, ದಿನಾಂಕ 1–8–2008ರ ಮೂಲಕ ನೀಡಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1230

**ಸಿ. ರವಿಕುಮಾರ್**
ಪೀಠಾಧಿಕಾರಿ (ಜವಳಿ)
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ

## ಸಮಾಜ ಕಲ್ಯಾಣ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ 45 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಮಂಜೂರು ಮಾಡುವ ಬಗ್ಗೆ ಆದೇಶ.

**ಓದಲಾಗಿದೆ:** ಕಾರ್ಯನಿರ್ವಾಹಕ ನಿರ್ದೇಶಕರು, ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ರವರ ಪತ್ರ ಸಂಖ್ಯೆ: ಕವಶಿಸಸ/ಸಿಆರ್(ಶಿಕ್ಷಣ)–19/2008–09/830, ದಿನಾಂಕ 31–7–2008.

**ಪ್ರಸ್ತಾವನೆ :**

ಮೇಲೆ ಓದಲಾದ ಪ್ರಸ್ತಾವನೆಯಲ್ಲಿ ಕಾರ್ಯನಿರ್ವಾಹಕ ನಿರ್ದೇಶಕರು ಕರ್ನಾಟಕ ವಸತಿ ಶಿಕ್ಷಣ ಸಂಸ್ಥೆಗಳ ಸಂಘ, ಬೆಂಗಳೂರು ಇವರು 2008–09ನೇ ಸಾಲಿಗೆ ಪರಿಶಿಷ್ಟ ಜಾತಿಯ –18, ಪರಿಶಿಷ್ಟ ವರ್ಗ–04 ಮತ್ತು ಹಿಂದುಳಿದ ವರ್ಗ –23 ರಂತೆ ಒಟ್ಟು 45 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಪ್ರಾರಂಭಿಸಲು ಪ್ರಸ್ತಾವನೆ ಕಳುಹಿಸಿರುತ್ತಾರೆ. ಅದರಂತೆ ಹೊಸದಾಗಿ 45 ವಿವಿಧ ವರ್ಗಗಳ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ಪ್ರಾರಂಭಿಸಲು ತೀರ್ಮಾನಿಸಿ ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಸಕಇ 47 ಮೊದೇಶಾ 2008, ಬೆಂಗಳೂರು, ದಿನಾಂಕ: 22ನೇ ಆಗಸ್ಟ್ 2008.**

2008–09ನೇ ಸಾಲಿಗೆ ಪರಿಶಿಷ್ಟ ಜಾತಿ –18, ಪರಿಶಿಷ್ಟ ವರ್ಗ –04 ಮತ್ತು ಹಿಂದುಳಿದ ವರ್ಗಗಳ 23 ರಂತೆ ಒಟ್ಟು 45 ಹೊಸ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳನ್ನು ರಾಜ್ಯದಲ್ಲಿನ ಈ ಕೆಳಕಂಡ ಸ್ಥಳಗಳಲ್ಲಿ ಪ್ರಾರಂಭಿಸಲು ಸರ್ಕಾರವು ಮಂಜೂರಾತಿ ನೀಡಿ ಆದೇಶಿಸಿದೆ.

**ಪರಿಶಿಷ್ಟ ಜಾತಿ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು –18**

| ಜಿಲ್ಲೆಗಳು | ಕ್ರ.ಸಂ. | ವಿಧಾನಸಭಾ ಕ್ಷೇತ್ರಗಳು |
|---|---|---|
| ಬೀದರ್ | 1 | ಬಾಲ್ಕಿ |
| ತುಮಕೂರು | 2 | ತುಮಕೂರು ಗ್ರಾಮಾಂತರ |
| | 3 | ಗುಬ್ಬಿ |
| ಬೆಂಗಳೂರು ಗ್ರಾಮಾಂತರ | 4 | ದೊಡ್ಡಬಳ್ಳಾಪುರ |
| | 5 | ಸೊರಬ |
| | 6 | ತೀರ್ಥಹಳ್ಳಿ |
| | 7 | ಭದ್ರಾವತಿ |
| ಧಾರವಾಡ | 8 | ಕಲಘಟಗಿ |
| | 9 | ಕುಂದಗೋಳ |
| ಬೆಳಗಾಂ | 10 | ಬೆಳಗಾಂ ಗ್ರಾಮಾಂತರ |
| | 11 | ಕುಡಚಿ |

| ಜಿಲ್ಲೆಗಳು | ಕ್ರ.ಸಂ. | ವಿಧಾನಸಭಾ ಕ್ಷೇತ್ರಗಳು |
|---|---|---|
| ಬಾಗಲಕೋಟೆ | 12 | ಹುನಗುಂದ |
| ಕೋಲಾರ | 13 | ಮುಳಬಾಗಿಲು |
| ಹಾವೇರಿ | 14 | ಶಿಗ್ಗಾಂ |
| ಚಿಕ್ಕಬಳ್ಳಾಪುರ | 15 | ಚಿಕ್ಕಬಳ್ಳಾಪುರ |
| ಹಾಸನ | 16 | ಸಕಲೇಶಪುರ |
| ಮೈಸೂರು | 17 | ಕೆ.ಆರ್. ನಗರ |
| ದಾವಣಗೆರೆ | 18 | ದಾವಣಗೆರೆ ಉತ್ತರ |

**ಪರಿಶಿಷ್ಟ ವರ್ಗದ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು –04**

| ಜಿಲ್ಲೆಗಳು | ಕ್ರ.ಸಂ. | ವಿಧಾನಸಭಾ ಕ್ಷೇತ್ರಗಳು |
|---|---|---|
| ರಾಯಚೂರು | 1 | ಮಸ್ಕಿ |
| ಬೆಳಗಾಂ | 2 | ಯಮಕನಮರಡಿ |
| ದಾವಣಗೆರೆ | 3 | ಹರಪ್ಪನಹಳ್ಳಿ |
| ಚಿತ್ರದುರ್ಗ | 4 | ಹಿರಿಯೂರು |

**ಹಿಂದುಳಿದ ವರ್ಗದ ಮೊರಾರ್ಜಿ ದೇಸಾಯಿ ವಸತಿ ಶಾಲೆಗಳು –23**

| ಜಿಲ್ಲೆಗಳು | ಕ್ರ.ಸಂ. | ವಿಧಾನಸಭಾ ಕ್ಷೇತ್ರಗಳು |
|---|---|---|
| ಗುಲ್ಬರ್ಗ | 1 | ಗುಲ್ಬರ್ಗ ಗ್ರಾಮಾಂತರ |
| ತುಮಕೂರು | 2 | ತಿಪಟೂರು |
| | 3 | ಪಾವಗಡ |
| ಕೋಲಾರ | 4 | ಚಿಕ್ಕಬಳ್ಳಾಪುರ |
| | 5 | ಮಾಲೂರು |
| ದಕ್ಷಿಣ ಕನ್ನಡ | 6 | ಸುಳ್ಯ |
| | 7 | ಮಂಗಳೂರು ಉತ್ತರ |
| ಉಡುಪಿ | 8 | ಕಾಪು |
| | 9 | ಬೈಂದೂರು |
| ಶಿವಮೊಗ್ಗ | 10 | ಸಾಗರ |
| ಧಾರವಾಡ | 11 | ಕುಂದಗೋಳ |
| | 12 | ನವಲಗುಂದ |
| ಬೆಳಗಾಂ | 13 | ನಿಪ್ಪಾಣಿ |
| | 14 | ಕಾಗವಾಡ |
| | 15 | ದೇವರಹಿಪ್ಪರಗಿ |
| | 16 | ಬೈಲಹೊಂಗಲ |
| ಚಿಕ್ಕಮಗಳೂರು | 17 | ಮೂಡಿಗೆರೆ |

| ಜಿಲ್ಲೆಗಳು | ಕ್ರ.ಸಂ. | ವಿಧಾನಸಭಾ ಕ್ಷೇತ್ರಗಳು |
|---|---|---|
| ಚಿತ್ರದುರ್ಗ | 18 | ಹಿರಿಯೂರು |
| | 19 | ಹೊಳಲ್ಕೆರೆ |
| ಬಾಗಲಕೋಟೆ | 20 | ಕಲಾದಗಿ ಗ್ರಾಮ |
| ಬಳ್ಳಾರಿ | 21 | ಬಳ್ಳಾರಿ ಗ್ರಾಮಾಂತರ |
| ಹಾಸನ | 22 | ಬೇಲೂರು |
| ಬೀದರ್ | 23 | ಬಸವಕಲ್ಯಾಣ |

ಈಗಾಗಲೇ ಶೈಕ್ಷಣಿಕ ವರ್ಷವು ಪ್ರಾರಂಭವಾಗಿರುವುದರಿಂದ ಈ ಆದೇಶದಲ್ಲಿ ಮಂಜೂರಾಗಿರುವ ವಸತಿ ಶಾಲೆಗಳನ್ನು 09ನೇ ಸೆಪ್ಟೆಂಬರ್ 2008ರೊಳಗೆ ಪ್ರಾರಂಭಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1220

**ಕೆ. ಸುಬ್ಬಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ–1 (ಪ್ರ),

ಸಮಾಜ ಕಲ್ಯಾಣ ಇಲಾಖೆ

**ಕಂದಾಯ ಸಚಿವಾಲಯ**

**ವಿಷಯ :** 2008–09ನೇ ಸಾಲಿನಲ್ಲಿ ಮುಜರಾಯಿ ಇಲಾಖಾ ಯೋಜನೆಯಡಿಯಲ್ಲಿ ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕಿನ ಧಾರ್ಮಿಕ ಸಂಸ್ಥೆಗಳಿಗೆ ಅನುದಾನ ಮಂಜೂರು ಮಾಡುವ ಕುರಿತು.

**ಪ್ರಸ್ತಾವನೆ :**

2008–09ನೇ ಸಾಲಿನ ಮುಜರಾಯಿ ಇಲಾಖಾ ಲೆಕ್ಕ ಶೀರ್ಷಿಕೆ "2250–00–800–1–03– ದೇವಸ್ಥಾನಗಳು ಮತ್ತು ಧಾರ್ಮಿಕ ಸಂಸ್ಥೆಗಳ–200–ನಿರ್ವಹಣೆ (ಯೋಜನೇತರ)" ರಡಿಯಲ್ಲಿ ರೂ. 1967.26 ಲಕ್ಷ ಅನುದಾನ ಒದಗಿಸಲಾಗಿದೆ. ಇದರಲ್ಲಿ ಹಿಂದೂ ಧಾರ್ಮಿಕ ಸಂಸ್ಥೆಗಳ ದುರಸ್ಥಿ/ಜೀರ್ಣೋದ್ಧಾರ/ನವೀಕರಣ ಕಾರ್ಯಗಳಿಗಾಗಿ ಅನುದಾನ ಬಿಡುಗಡೆ ಮಾಡಲು ಅವಕಾಶ ಇರುತ್ತದೆ.

ಅದರಂತೆ ಮುಜರಾಯಿ ಇಲಾಖಾ ಯೋಜನೆಯಡಿ ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕಿನ ಧಾರ್ಮಿಕ ಸಂಸ್ಥೆಗಳಿಗೆ ಅನುದಾನ ಮಂಜೂರು ಮಾಡಲು ಸರ್ಕಾರವು ತೀರ್ಮಾನಿಸಿದೆ. ಆದಕಾರಣ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 126 ಮುಅಬಿ 2008, ಬೆಂಗಳೂರು, ದಿನಾಂಕ: 21ನೇ ಆಗಸ್ಟ್ 2008.**

2008–09ನೇ ಸಾಲಿನಲ್ಲಿ ಲೆಕ್ಕ ಶೀರ್ಷಿಕೆ "2250–00–800–1–03–ದೇವಸ್ಥಾನಗಳು ಮತ್ತು ಧಾರ್ಮಿಕ ಸಂಸ್ಥೆಗಳ–200–ನಿರ್ವಹಣೆ (ಯೋಜನೇತರ)" ರಡಿಯಲ್ಲಿ ಒದಗಿಸಲಾದ ಅನುದಾನದಲ್ಲಿ ರಾಯಚೂರು ಜಿಲ್ಲೆ, ದೇವದುರ್ಗ ತಾಲ್ಲೂಕಿನ ಈ ಆದೇಶದ ಅನುಬಂಧದಲ್ಲಿ ವಿವರಿಸಿರುವ ಧಾರ್ಮಿಕ ಸಂಸ್ಥೆಗಳ ಅಭಿವೃದ್ಧಿ ಕಾಮಗಾರಿಗಳಿಗಾಗಿ ರೂ. 200.00 ಲಕ್ಷ (ಇನ್ನೂರು ಲಕ್ಷ ರೂ.ಗಳು ಮಾತ್ರ) ಗಳನ್ನು ಬಿಡುಗಡೆ ಮಾಡಲು ಹಣವನ್ನು ಧಾರ್ಮಿಕ ದತ್ತಿ ಆಯುಕ್ತರು, ಬೆಂಗಳೂರು ರವರಿಗೆ ಬಿಡುಗಡೆ ಮಾಡಲಾಗಿದೆ.

ಧಾರ್ಮಿಕ ದತ್ತಿ ಆಯುಕ್ತರು, ಅನುದಾನ ಬಿಲ್ಲಿನಲ್ಲಿ ಸಹಿ ಮಾಡುವುದರ ಜೊತೆಗೆ ಮೇಲು ಸಹಿ ಮಾಡಿ ಸದರಿ ಮೊತ್ತವನ್ನು ಖಜಾನೆಯಿಂದ ಪಡೆದು ಸಂಬಂಧಿಸಿದ ರಾಯಚೂರು ಜಿಲ್ಲಾಧಿಕಾರಿಯವರಿಗೆ ವಿತರಿಸಲು ಸರ್ಕಾರವು ಈ ಮೂಲಕ ಮಂಜೂರಾತಿ ನೀಡಿದೆ.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆ.ಇ. 1010 ವೆಚ್ಚ–7, 2008 ದಿನಾಂಕ 20–8–2008ರಲ್ಲಿ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಜಿ. ರಾಮಚಂದ್ರಯ್ಯ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಂದಾಯ ಇಲಾಖೆ (ಮುಜರಾಯಿ)

**ಸರ್ಕಾರಿ ಆದೇಶ ಸಂಖ್ಯೆ: ಕಂಇ 126 ಮುಅಬಿ 2008, ಬೆಂಗಳೂರು ದಿನಾಂಕ 21-8-2008 ಅನುಬಂಧ**

**ರಾಯಚೂರು ಜಿಲ್ಲೆ (ದೇವದುರ್ಗ ತಾಲ್ಲೂಕು)**

| ಕ್ರ.ಸಂ. | ಧಾರ್ಮಿಕ ಸಂಸ್ಥೆಯ ಹೆಸರು | ಮಂಜೂರು ಮಾಡಲಾದ ಅನುದಾನ (ರೂ. ಲಕ್ಷಗಳಲ್ಲಿ) |
|---|---|---|
| 1 | ಶ್ರೀ ಶಿವರಾಯನ ಧಾರ್ಮಿಕ ಸಂಸ್ಥೆಯ ಅಭಿವೃದ್ಧಿ, ಮುಂಡರಗಿ ಗ್ರಾಮ | 23.75 |
| 2 | ಶ್ರೀ ಚನ್ನಬಸವೇಶ್ವರ ಕ್ಷೇತ್ರ ಅಭಿವೃದ್ಧಿ ಗಲಗ ಗ್ರಾಮ | 12.00 |
| 3 | ಶ್ರೀ ಜಯಗಾಂತಲಿಂಗೇಶ್ವರ ಧಾರ್ಮಿಕ ಕ್ಷೇತ್ರದ ಅಭಿವೃದ್ಧಿ ಜಾಲಹಳ್ಳಿ ಗ್ರಾಮ | 6.25 |
| 4 | ಶ್ರೀ ಬೂದಿ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಗಬ್ಬೂರು ಗ್ರಾಮ | 10.00 |
| 5 | ಶ್ರೀ ಬೆಟ್ಟದ ಅಮಾತೇಶ್ವರ ಸುಕ್ಷೇತ್ರದ ಅಭಿವೃದ್ಧಿ ದೇವರಗುಡ್ಡ ಗ್ರಾಮ | 12.00 |
| 6 | ಶ್ರೀ ದೇವರದಗುಂಡರ್ತಿ ಸುಕ್ಷೇತ್ರದ ಅಭಿವೃದ್ಧಿ ಗುಂಡವರ್ತಿ ಗ್ರಾಮ | 12.00 |
| 7 | ಶ್ರೀ ಮಾಸಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಮಸರ್‌ಕಲ್ ಗ್ರಾಮ | 12.00 |
| 8 | ಶ್ರೀ ಭಾಗ್ಯವಂತಿ ದೇವೆ ಸುಕ್ಷೇತ್ರದ ಅಭಿವೃದ್ಧಿ ಅರಕೇರಾ ಗ್ರಾಮ | 23.75 |
| 9 | ಶ್ರೀ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಜಾಗಟಕಲ್ ಗ್ರಾಮ | 10.00 |
| 10 | ಶ್ರೀ ರಂಗನಾಥ ಸುಕ್ಷೇತ್ರದ ಅಭಿವೃದ್ಧಿ ಮಾನಸಗಲ್ ಗ್ರಾಮ | 23.75 |
| 11 | ಶ್ರೀ ಲಕ್ಷ್ಮೀನರಸಿಂಹ ಸುಕ್ಷೇತ್ರದ ಅಭಿವೃದ್ಧಿ ಕೊಪ್ಪರ ಗ್ರಾಮ | 6.25 |
| 12 | ಶ್ರೀ ರಾಘವೇಂದ್ರ ಸ್ವಾಮಿ ಸುಕ್ಷೇತ್ರದ ಅಭಿವೃದ್ಧಿ ದೇವದುರ್ಗ ಪಟ್ಟಣ | 2.50 |
| 13 | ಶ್ರೀ ಬಸವೇಶ್ವರ ಸುಕ್ಷೇತ್ರದ ಅಭಿವೃದ್ಧಿ ಹೂವಿನಗಡಗಿ ಗ್ರಾಮ | 23.75 |
| 14 | ಶ್ರೀ ಅಲ್ಲಮಪ್ರಭು ಲಿಂಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಗೂಗಲ್ ಗ್ರಾಮ | 12.00 |
| 15 | ಶ್ರೀ ಸಿದ್ದರಾಮೇಶ್ವರ ಸುಕ್ಷೇತ್ರದ ಅಭಿವೃದ್ಧಿ ದೇವದುರ್ಗ ಗ್ರಾಮ | 5.00 |
| 16 | ಶ್ರೀ ಸುಗೇಶ್ವರ ಸುಕ್ಷೇತ್ರದ ಅಭಿವೃದ್ಧಿ ಅರಕೆರೆ ಗ್ರಾಮ | 5.00 |
| | **ಒಟ್ಟು** | **200.00** |

ಪಿ.ಆರ್.1217

**ಜಿ. ರಾಮಚಂದ್ರಯ್ಯ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಂದಾಯ ಇಲಾಖೆ (ಮುಜರಾಯಿ)

**ಒಳಾಡಳಿತ ಸಚಿವಾಲಯ**

**ವಿಷಯ :** ಶ್ರೀ ಬಿ.ಎನ್. ಉಮಚಗಿಮಠ, ವಾರ್ಡರ್, ವಿಶೇಷ ಉಪ ಕಾರಾಗೃಹ, ಕೆಜಿಎಫ್ (ಅಮಾನತ್ತಿನಲ್ಲಿರುವವರು) ಇವರ ಅಮಾನತ್ತನ್ನು ರದ್ದುಪಡಿಸಿ, ಸೇವೆಗೆ ಪುನರ್ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಕಛೇರಿ ಆದೇಶ ಸಂಖ್ಯೆ: ವಿಚಾರಣೆ/ಸಿಆರ್-11/ 2007-08, ದಿನಾಂಕ 15-6-2007.
2. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಅಧಿಕೃತ ಜ್ಞಾಪನ ಸಂಖ್ಯೆ: ಇ4/ಸಿಆರ್-51/2006, ದಿನಾಂಕ 15-6-2007.
3. ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ: ವಿಚಾರಣೆ/ಸಿಆರ್-11/2007-08, ದಿನಾಂಕ 10-12-2007.

**ಪ್ರಸ್ತಾವನೆ :**

ಶ್ರೀ ಬಿ.ಎನ್. ಉಮಚಗಿಮಠ ಇವರು ಕೆಜಿಎಫ್‌ನ ವಿಶೇಷ ಉಪ ಕಾರಾಗೃಹದಲ್ಲಿ ವಾರ್ಡರ್ ಆಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಇವರು ಸದರಿ ಕಾರಾಗೃಹದ ಆಡಳಿತದಲ್ಲಿ ಆಗಿಂದಾಗ್ಗೆ ಮಧ್ಯಸ್ಥಿಕೆ ವಹಿಸಿ ಸುಗಮ ಆಡಳಿತಕ್ಕೆ ತೊಂದರೆ ಮಾಡುತ್ತಿದ್ದಾರೆಂದು ಪರಿವೀಕ್ಷಣೆ ಸಮಯದಲ್ಲಿ ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರವರ ಕಛೇರಿಯ ಅಂಕಿಅಂಶಗಳ ಮತ್ತು ಸಂಶೋಧನಾಧಿಕಾರಿಗಳಿಗೆ ಪ್ರಭಾರಿ ಅಧೀಕ್ಷಕರಿಗೆ ವರದಿ ಬಂದಿತು. ಸದರಿ ವಿಶೇಷ ಉಪ ಕಾರಾಗೃಹದಲ್ಲಿ ಸ್ಥಳೀಯರು ಹೆಚ್ಚಾಗಿ ತಮಿಳರು, ಕೂಲಿ ಕಾರ್ಮಿಕರು ಹೆಚ್ಚಾಗಿದ್ದು, ಇಲ್ಲಿ ಅಪರಾಧಿಗಳ ಸಂಖ್ಯೆಯೂ ಹೆಚ್ಚಾಗಿದ್ದು, ಬಹಳ ಸೂಕ್ಷ್ಮ ಪ್ರದೇಶವಾಗಿದ್ದು, ಇಂತಹ ಕಾರಾಗೃಹದಲ್ಲಿ ಸಮಯ ಪ್ರಜ್ಞೆ ಹಾಗೂ ನಿಷ್ಠಾವಂತ ಸಿಬ್ಬಂದಿ ಅವಶ್ಯಕತೆ ಇದ್ದು, ಶ್ರೀ ಬಿ.ಎನ್. ಉಮಚಗಿಮಠ, ಇವರಂತಹ ವೀಕ್ಷಕರು ಸುಗಮ ಆಡಳಿತಕ್ಕೆ ಅಡ್ಡಿಯಾಗಿರುವುದು ಕಂಡುಬಂದಿದೆ. ಅಲ್ಲಿಗೆ ಸದರಿಯವರು ಕೋಲಾರ ಜಿಲ್ಲಾ ಉಪ ಕಾರಾಗೃಹದಲ್ಲಿ ಶ್ರೀಮತಿ ಪಾರ್ವತಮ್ಮ ರವರೊಂದಿಗೆ ಒಂದು ವರ್ಷದಿಂದ ಅನೈತಿಕ ಸಂಬಂಧವಿರಿಸಿಕೊಂಡಿದ್ದು, ಇವರ ಒಡನಾಟದಿಂದ ಕೋಲಾರ ಪೇಟೆ ಜನ ಹಾಗೂ ಸಂಬಂಧಿಕರು ಹಗುರವಾಗಿ ಮಾತನಾಡುತ್ತಾ ಕುಟುಂಬ ಗೌರವಕ್ಕೆ ಧಕ್ಕೆ ಉಂಟಾಗುತ್ತಿರುವುದಾಗಿ ಶ್ರೀಮತಿ ಪಾರ್ವತಮ್ಮರವರ ಸಹೋದರ ದೂರು ಸಲ್ಲಿಸಿರುವುದಾಗಿ ಕೋಲಾರ ಜಿಲ್ಲಾ ಉಪ ಕಾರಾಗೃಹದ ಅಧೀಕ್ಷಕರು ಮಾಡಿದ ವರದಿಗಳನ್ನು ಆಧರಿಸಿ, ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಗೃಹಗಳ ಮಹಾ ನಿರೀಕ್ಷಕರವರು ಮೇಲೆ (1)ರಲ್ಲಿ ಓದಲಾದ ಕಛೇರಿ ಆದೇಶದಲ್ಲಿ, 1957ರ ಕೆ.ಸಿ.ಎಸ್. (ಸಿ.ಸಿ. ಮತ್ತು ಎ) ನಿಯಮಗಳ 10(1)(ಎ) ನಿಯಮದಲ್ಲಿ ಪ್ರದತ್ತವಾದ ಅಧಿಕಾರವನ್ನು ಪ್ರಯೋಗಿಸಿ, ಶ್ರೀ ಬಿ.ಎನ್. ಉಮಚಗಿಮಠ, ವೀಕ್ಷಕ ಇವರನ್ನು ಮುಂದೆ ಜರುಗತಕ್ಕ ಇಲಾಖಾ ವಿಚಾರಣೆಯನ್ನು ಕಾಯ್ದಿರಿಸಿ, ತಕ್ಷಣದಿಂದ ಜಾರಿಗೆ ಬರುವಂತೆ ನಿಲಂಬನದಲ್ಲಿರಿಸಿರುತ್ತಾರೆ.

ಶ್ರೀ ಬಿ.ಎನ್. ಉಮಚಗಿಮಠ, ವಾರ್ಡರ್ ಇವರನ್ನು ನಿಲಂಬನದಲ್ಲಿಸಿದ ನಂತರ ಇವರ ಹುದ್ದೆಯ ಹಕ್ಕ(lien)ನ್ನು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರವರು ಮೇಲೆ (2)ರಲ್ಲಿ ಓದಲಾದ ಅಧಿಕೃತ ಜ್ಞಾಪನದಲ್ಲಿ ಬೆಂಗಳೂರು ಕೇಂದ್ರ ಕಾರಾಗೃಹಕ್ಕೆ ವರ್ಗಾಯಿಸಿರುತ್ತಾರೆ.

ಶ್ರೀ ಬಿ.ಎನ್. ಉಮಚಗಿಮಠ, ವಾರ್ಡರ್, ಇವರನ್ನು ದಿನಾಂಕ 15-6-2007 ರಿಂದ ನಿಲಂಬನದಲ್ಲಿಡಲಾಗಿದೆ. ಇವರ ನಿಲಂಬನದ ಅವಧಿಯು ಆರು ತಿಂಗಳುಗಳಿಗಿಂತ ಮೇಲಾಗಿದೆ. 1957ರ ಕೆ.ಸಿ.ಎಸ್. (ಸಿ.ಸಿ. ಮತ್ತು ಎ) ನಿಯಮಗಳ 10(6)ನೇ ನಿಯಮಗಳ ಪ್ರಕಾರ ಅಮಾನತ್ತಿನ ಅವಧಿಯನ್ನು ಆರು ತಿಂಗಳಿಗಿಂತ ಹೆಚ್ಚಿನ ಅವಧಿಗೆ ವಿಸ್ತರಿಸಬೇಕಾಗಿದ್ದಲ್ಲಿ ಸರ್ಕಾರವು ಆದೇಶಿಸಬೇಕಾಗಿದೆ. ಆದುದರಿಂದ ಈ ಪ್ರಕರಣದಲ್ಲಿ ಶಿಸ್ತು ಕ್ರಮ ಜರುಗಿಸಬೇಕಾಗಿರುವುದರಿಂದ ಶ್ರೀ ಬಿ.ಎನ್. ಉಮಚಗಿಮಠರವರ ನಿಲಂಬನವನ್ನು ವಿಸ್ತರಿಸಬೇಕೆಂದು ಹೆಚ್ಚುವರಿ ಪೊಲೀಸ್ ಮಹಾ ನಿರ್ದೇಶಕರು ಮತ್ತು ಕರ್ನಾಟಕದ ಕಾರಾಗೃಹಗಳ ಮಹಾ ನಿರೀಕ್ಷಕರವರು ಮೇಲೆ (3)ರಲ್ಲಿ ಓದಲಾದ ಪತ್ರದಲ್ಲಿ ಕೋರಿ ಸರ್ಕಾರಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಿರುತ್ತಾರೆ.

ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಹೆಚ್‌ಡಿ 55 ಪಿಆರ್‌ಇ 2008 ಬೆಂಗಳೂರು, ದಿನಾಂಕ: 30ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಶ್ರೀ ಬಿ.ಎನ್. ಉಮಚಗಿಮಠ, ವಾರ್ಡರ್, ವಿಶೇಷ ಉಪ ಕಾರಾಗೃಹ, ಕೆಜಿಎಫ್ (ಪ್ರಸ್ತುತ ಇವರ ಹುದ್ದೆಯ ಹಕ್ಕನ್ನು ಬೆಂಗಳೂರು ಕೇಂದ್ರ ಕಾರಾಗೃಹಕ್ಕೆ ವರ್ಗಾಯಿಸಿದೆ), ಇವರ ವಿರುದ್ಧ ಇಲಾಖಾ ವಿಚಾರಣೆಯನ್ನು ಬಾಕಿ ಇರಿಸಿ, 1957ರ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಗಳ 10ನೇ ನಿಯಮದ 5ನೇ ಉಪ ನಿಯಮ (ಸಿ) ರನ್ವಯ ಈ ಕೂಡಲೇ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಇವರ ಅಮಾನತ್ತನ್ನು ರದ್ದುಪಡಿಸಿ, ಕೇಂದ್ರ ಕಾರಾಗೃಹ, ಪರಪ್ಪನ ಅಗ್ರಹಾರ, ಬೆಂಗಳೂರು ಇಲ್ಲಿ ಖಾಲಿ ಇರುವ ವಾರ್ಡರ್ ಹುದ್ದೆಗೆ ವರ್ಗಾವಣೆಯ ಮೂಲಕ ಸೇವೆಗೆ ಪುನರ್ ನೇಮಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1257

**ಟಿ. ಕೃಷ್ಣಮೂರ್ತಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಸೆರೆಮನೆ ಮತ್ತು ಸಿನಿಮಾ)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ಸಿಬ್ಬಂದಿ ವರ್ಗದವರಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ಅಳವಡಿಸುವ ಬಗ್ಗೆ.

**ಓದಲಾಗಿದೆ:** 1. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ (ಬಿಪಿಇ) 13 ಎಆರ್‌ಯು 2001, ದಿನಾಂಕ 10–8–2001.

2. ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರ ಪತ್ರ ಸಂಖ್ಯೆ: ಕರೇಮಾಮ/ಆಡಳಿತ/ಎ1/ಸ್ವನಿಯೋ/2007–08/507, ದಿನಾಂಕ 14–6–2007, 1–12–2007, 12–2–2008 ಹಾಗೂ 13–6–2008.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಸಾರ್ವಜನಿಕ ವಲಯ ಉದ್ದಿಮೆಗಳ ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯಡಿಯಲ್ಲಿ ನಿವೃತ್ತಿ ನೀಡುವುದಕ್ಕೆ ಮಾರ್ಗಸೂಚಿಯನ್ನು ಹೊರಡಿಸಲಾಗಿರುತ್ತದೆ. ಸದರಿ ಮಾರ್ಗಸೂಚಿಯನ್ವಯ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯ ಮೂಲಕ ನಿವೃತ್ತಿ ನೀಡಲು ಸರ್ಕಾರದ ಅನುಮತಿಯನ್ನು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಕೋರಿರುತ್ತದೆ. ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ನಷ್ಟದಲ್ಲಿರುವ ಅದರ ಕೆಲವು ಶಾಖೆಗಳನ್ನು ಮುಚ್ಚಬೇಕಾಗಿರುವುದರಿಂದ ಕಂಪೆನಿಯಲ್ಲಿಯ ಹೆಚ್ಚುವರಿ ಸಿಬ್ಬಂದಿ ವರ್ಗವನ್ನು ಗುರುತಿಸುವ ಸಲುವಾಗಿ, ಒಂದು ತಂಡವನ್ನು ರಚಿಸಿ ಸದರಿ ತಂಡವು ನೀಡಿರುವ ವರದಿಯನ್ನು ಮಂಡಳಿಯ 146ನೇ ಸಭೆಯಲ್ಲಿ ಚರ್ಚಿಸಿ ಹೆಚ್ಚುವರಿ ಎಂದು ಗುರುತಿಸಿರುವ ಅಧಿಕಾರಿ/ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ನೀಡಲು ಪ್ರಸ್ತಾವಿಸಲಾಗಿದೆಯಾಗಿ ಕಂಪೆನಿಯು ಸತತವಾಗಿ ನಷ್ಟದಲ್ಲಿ ನಡೆಯುತ್ತಿದ್ದು, ಸ್ವಯಂ ನಿವೃತ್ತಿ ಮೂಲಕ ಸಿಬ್ಬಂದಿಯನ್ನು ಕಡಿತಗೊಳಿಸುವುದು ಅನಿವಾರ್ಯವಾಗಿರುತ್ತದೆ. ಅಲ್ಲದೇ ಸರ್ಕಾರವು ಕಂಪೆನಿಯು ಸ್ವಯಂ ನಿವೃತ್ತಿ ಯೋಜನೆಯನ್ನು ಅಳವಡಿಸಿಕೊಂಡು ಅದರ ಖರ್ಚು ವೆಚ್ಚಗಳನ್ನು ಕಡಿತಗೊಳಿಸಬಹುದಾಗಿರುತ್ತದೆಂದು, ಮಂಡಳಿಯಲ್ಲಿ ಒಟ್ಟಾರೆ 44 ಹೆಚ್ಚುವರಿ ಹುದ್ದೆಗಳನ್ನು ಗುರುತಿಸಲಾಗಿದೆಯೆಂದು, ಅವುಗಳಲ್ಲಿ 35 ಹುದ್ದೆಗಳಲ್ಲಿಯ ಅಧಿಕಾರಿ/ನೌಕರರು ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿಗಾಗಿ ಅರ್ಜಿ ಸಲ್ಲಿಸಿರುವುದಾಗಿ ತಿಳಿಸಿ, ಈ 35 ಅಧಿಕಾರಿ/ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯಡಿಯಲ್ಲಿ ನಿವೃತ್ತಿ ನೀಡುವುದಕ್ಕೆ ಸರ್ಕಾರದ ಅನುಮೋದನೆ ನೀಡುವಂತೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ರೇಷ್ಮೆ ಮಾರಾಟ ಮಂಡಳಿ ಇವರು ಸರ್ಕಾರವನ್ನು ಕೋರಿರುತ್ತಾರೆ.

ಸಾರ್ವಜನಿಕ ಉದ್ದಿಮೆಗಳ ವಲಯಗಳ ಉದ್ದಿಮೆಯ ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯನ್ನು ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ಆದೇಶದಲ್ಲಿ ಜಾರಿಗೊಳಿಸಲಾಗಿದೆ. ಈ ಯೋಜನೆಯನ್ವಯ ಮಂಡಳಿಯು ತನ್ನ ಮಂಡಳಿಯಲ್ಲಿ ಹೆಚ್ಚುವರಿ ಹುದ್ದೆಗಳನ್ನು ಗುರುತಿಸಿರುವ ಬಗ್ಗೆ ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಪತ್ರಗಳಲ್ಲಿ ತಿಳಿಸಿದೆ. ಸದರಿ ಪತ್ರಗಳಲ್ಲಿಯ ಸ್ವಯಂ ನಿವೃತ್ತಿ ಯೋಜನೆಯ ಪ್ರಸ್ತಾವನೆಯನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಒಟ್ಟು 35 ವಿವಿಧ ವೃಂದಗಳ ಅಧಿಕಾರಿ/ನೌಕರರಿಗೆ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ನೀಡಲು ಅನುಮತಿಸಲು ತೀರ್ಮಾನಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 40 ರೇಉನಿ 2007, ಬೆಂಗಳೂರು, ದಿನಾಂಕ: 24ನೇ ಜುಲೈ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ, ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ (ಬಿಪಿಇ) 13 ಎಆರ್‌ಯು 2001, ದಿನಾಂಕ 10–8–2001ರಲ್ಲಿಯ ಷರತ್ತುಗಳನ್ನು ಪೂರೈಸಬೇಕೆನ್ನುವ ಷರತ್ತಿಗೊಳಪಟ್ಟು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯ ವಿವಿಧ ವೃಂದಗಳ ಒಟ್ಟು 35 ಅಧಿಕಾರಿ/ನೌಕರರಿಗೆ ದಿನಾಂಕ 31–7–2008ರ ಅಪರಾಹ್ನದಿಂದ ಜಾರಿಗೆ ಬರುವಂತೆ ವಿಶೇಷ ಸ್ವಯಂ ನಿವೃತ್ತಿ ಯೋಜನೆಯಡಿ ನಿವೃತ್ತಿ ಹೊಂದಲು ಅನುಮತಿ ನೀಡಿದೆ.

ರದ್ದತಿಗಾಗಿ ಹೆಚ್ಚುವರಿಯೆಂದು ಗುರುತಿಸಿರುವ ಹುದ್ದೆಗಳು ದಿನಾಂಕ 31–7–2008ರ ಅಪರಾಹ್ನದಿಂದ ಜಾರಿಗೆ ಬರುವಂತೆ ರದ್ದಾಗುತ್ತವೆ ಮತ್ತು ಅಂತಹ ಹುದ್ದೆಗಳ ಎದುರು ಅಧಿಕಾರಿ/ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿದ್ದಲ್ಲಿ ಅವರಿಗೆ ಸೂಕ್ತ ಪರ್ಯಾಯ ಸ್ಥಳವನ್ನು ನೀಡತಕ್ಕದ್ದು.

ಈ ನೌಕರರ ವಿಶೇಷ ಸ್ವಯಂ ನಿವೃತ್ತಿಗಾಗಿ ಅಗತ್ಯವಿರುವ ಮೊತ್ತವನ್ನು ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ತನ್ನ ಆಂತರಿಕ ಸಂಪನ್ಮೂಲದಿಂದ ಭರಿಸತಕ್ಕದ್ದು. ಈ ಬಗ್ಗೆ ರಾಜ್ಯ ಸರ್ಕಾರದಿಂದ ಯಾವುದೇ ಆರ್ಥಿಕ ಸಹಾಯವನ್ನು ನೀಡಲಾಗುವುದಿಲ್ಲ.

ಹೆಚ್ಚುವರಿ ಎಂದು ಗುರುತಿಸಿರುವ ಹುದ್ದೆಗಳನ್ನು ಅಲ್ಲಿ ಕೆಲಸ ನಿರ್ವಹಿಸುತ್ತಿರುವವರು ಸ್ವಯಂ ನಿವೃತ್ತಿ ಅಥವಾ ಇನ್ನಾವುದೇ ರೀತಿ ನಿವೃತ್ತಿಯಾದ ನಂತರ ಕಡ್ಡಾಯವಾಗಿ ರದ್ದುಪಡಿಸತಕ್ಕದ್ದು.

ಸಾಧ್ಯವಿದ್ದಲ್ಲಿ ಕರ್ನಾಟಕ ರೇಷ್ಮೆ ಮಾರಾಟ ಮಂಡಳಿಯು ಇನ್ನೂ ಹೆಚ್ಚಿನ ದಕ್ಷತೆಗೆ (streamlining) ಪರಿಗಣಿಸುವುದು.

ಈ ಆದೇಶವನ್ನು ಸಾರ್ವಜನಿಕ ಉದ್ದಿಮೆಗಳ ಇಲಾಖೆಯ ಟಿಪ್ಪಣಿ ಸಂಖ್ಯೆ: ಡಿಪಿಇ 47 ಎಸ್‌ಪಿಯು 2007, ದಿನಾಂಕ 29–5–2008 ಹಾಗೂ ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಎಫ್‌ಡಿ/868/ವೆಚ್ಚ–1/2008, ದಿನಾಂಕ 10–7–2008 ರಲ್ಲಿನ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಭಾರತಿ ಆರ್. ನಾಯಕ್**

ಪೀಠಾಧಿಕಾರಿ (ರೇಷ್ಮೆ)

ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

**ವಿಷಯ :** ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಚಾಮರಾಜನಗರದಲ್ಲಿರುವ ಕಟ್ಟಡವನ್ನು ಇಂಜಿನಿಯರಿಂಗ್ ಕಾಲೇಜು ವಸತಿ ನಿಲಯಕ್ಕೆ ನೀಡುವ ಬಗ್ಗೆ.

**ಓದಲಾಗಿದೆ:** 1. ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಹಾಗೂ ನಿರ್ದೇಶಕರು ಇವರ ಪತ್ರ ಸಂಖ್ಯೆ: ಸರೇಕೃಕ್ಷೇ/ಚಾಮ/ಸಸಭ/2ಎ/07–08, ದಿ: 16–11–2007, 4–3–2008, 25–4–2008 ಮತ್ತು 16–6–2008ರ ಪತ್ರ.

2. ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ, (ಉನ್ನತ ಶಿಕ್ಷಣ) ಇವರು ಮುಖ್ಯ ಕಾರ್ಯದರ್ಶಿಯವರಿಗೆ ಬರೆದ 13–3–2008ರ ಟಿಪ್ಪಣಿ.

**ಪ್ರಸ್ತಾವನೆ :**

ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 16–11–2007 ಹಾಗೂ 4–3–2008ರ ಪತ್ರಗಳಲ್ಲಿ ಚಾಮರಾಜನಗರದ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರದ ಆವರಣದಲ್ಲಿ ಪುರಭವನ ನಿರ್ಮಿಸಲು ರೇಷ್ಮೆ ಕೃಷಿ ಕ್ಷೇತ್ರದ ಆವರಣದಲ್ಲಿಯ ಎಲ್ ಆಕಾರದ ಇಲಾಖೆಯ ಕಟ್ಟಡವೂ ಒಳಗೊಂಡಂತೆ ಉತ್ತರ–ದಕ್ಷಿಣ 210 ಅಡಿ ಪೂರ್ವ ಪಶ್ಚಿಮ 200 ಅಡಿ ಒಟ್ಟು 420 ಚದರ ಅಡಿ ಜಮೀನನ್ನು ಚಾಮರಾಜನಗರ ಸಭೆಗೆ ಹಸ್ತಾಂತರಿಸಲು ಸರ್ಕಾರದ ಅನುಮೋದನೆ ನೀಡುವಂತೆ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಕೋರಿದ್ದರು. ಮೇಲೆ ಓದಲಾದ ಕ್ರಮ ಸಂಖ್ಯೆ (2)ರ ಟಿಪ್ಪಣಿಯಲ್ಲಿ ಪ್ರಧಾನ ಕಾರ್ಯದರ್ಶಿ, ಶಿಕ್ಷಣ ಇಲಾಖೆ (ಉನ್ನತ ಶಿಕ್ಷಣ) ಹಾಗೂ ಚಾಮರಾಜನಗರ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿರವರು ಹೊಸ ಇಂಜಿನಿಯರಿಂಗ್ ಕಾಲೇಜಿನ ವಸತಿ ನಿಲಯವನ್ನು ಕಟ್ಟುವವರೆಗೆ ಒಂದು ವರ್ಷದ ಅವಧಿಗೆ ರೇಷ್ಮೆ ಇಲಾಖೆಯ ಕಟ್ಟಡವನ್ನು ಹೊಸ ಇಂಜಿನಿಯರಿಂಗ್ ಕಾಲೇಜಿನ ವಸತಿ ನಿಲಯಕ್ಕಾಗಿ ಹಸ್ತಾಂತರಿಸುವಂತೆ ಕೋರಿರುತ್ತಾರೆ. ಅದರಂತೆ, ಮೇಲೆ ಓದಲಾದ ಕ್ರಮ ಸಂಖ್ಯೆ (1)ರ ದಿನಾಂಕ 25–4–2008 ಹಾಗೂ 18–6–2008ರ ಪತ್ರಗಳಲ್ಲಿ ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಚಾಮರಾಜನಗರದ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರದಲ್ಲಿರುವ ರೇಷ್ಮೆ ಇಲಾಖೆಯ ಕಟ್ಟಡವನ್ನು ಇಂಜಿನಿಯರಿಂಗ್ ಕಾಲೇಜಿನ ವಸತಿ ನಿಲಯಕ್ಕೆ ತಾತ್ಕಾಲಿಕವಾಗಿ ನೀಡುವಂತೆ ಚಾಮರಾಜನಗರ ಜಿಲ್ಲಾ ಉಸ್ತುವಾರಿ ಕಾರ್ಯದರ್ಶಿಗಳು ಹಾಗೂ ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಶಿಕ್ಷಣ ಇಲಾಖೆ ಇವರು ಕೋರಿರುವುದಾಗಿ ತಿಳಿಸಿ, ಸದರಿ ಕಟ್ಟಡವನ್ನು 8–9 ತಿಂಗಳು ಇಂಜಿನಿಯರಿಂಗ್ ಕಾಲೇಜಿನ ವಸತಿ ನಿಲಯಕ್ಕಾಗಿ ನೀಡಬಹುದಾಗಿದೆ. ಪರ್ಯಾಯ ವ್ಯವಸ್ಥೆ ಆದ ನಂತರ ಪುರಭವನ ನಿರ್ಮಾಣಕ್ಕೆ ನಗರಸಭೆ ಚಾಮರಾಜನಗರ ಇವರಿಗೆ ಖಾಯಂ ಆಗಿ ಹಸ್ತಾಂತರಿಸಲು ಕ್ರಮ ಕೈಗೊಳ್ಳಬಹುದೆಂದು ಅಭಿಪ್ರಾಯ ಪಡಲಾಗಿದೆ ಎಂದು ತಿಳಿಸಿ, ಈ ಬಗ್ಗೆ ಸೂಕ್ತ ಆದೇಶ ಹೊರಡಿಸುವಂತೆ ಕೋರಿರುತ್ತಾರೆ.

ರೇಷ್ಮೆ ಕೃಷಿ ಅಭಿವೃದ್ಧಿ ಆಯುಕ್ತರು ಶಿಫಾರಸ್ಸು ಮಾಡಿರುವಂತೆ ರೇಷ್ಮೆ ಕೃಷಿ ಕ್ಷೇತ್ರ, ಚಾಮರಾಜನಗರದ ಕಟ್ಟಡವನ್ನು ಇಂಜಿನಿಯರಿಂಗ್ ಕಾಲೇಜು ವಸತಿ ನಿಲಯಕ್ಕಾಗಿ ನೀಡುವ ವಿಷಯವನ್ನು ಪರಿಶೀಲಿಸಲಾಗಿದ್ದು, ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 65 ರೇಯೋವಿ 2007, ಬೆಂಗಳೂರು, ದಿನಾಂಕ: 24ನೇ ಜುಲೈ 2008.**

ರೇಷ್ಮೆ ಇಲಾಖೆಯ ಸರ್ಕಾರಿ ರೇಷ್ಮೆ ಕೃಷಿ ಕ್ಷೇತ್ರ, ಚಾಮರಾಜನಗರದಲ್ಲಿನ ಕಟ್ಟಡವನ್ನು ಪರ್ಯಾಯ ವ್ಯವಸ್ಥೆ ಆಗುವವರೆಗೆ 8–9 ತಿಂಗಳು ಇಂಜಿನಿಯರಿಂಗ್ ಕಾಲೇಜಿನ ವಸತಿ ನಿಲಯಕ್ಕಾಗಿ ತಾಂತ್ರಿಕ ಶಿಕ್ಷಣ ಇಲಾಖೆಗೆ ತಾತ್ಕಾಲಿಕವಾಗಿ ನೀಡುವುದಕ್ಕೆ ಮಂಜೂರಾತಿ ನೀಡಲಾಗಿದೆ.

ಸರ್ಕಾರಿ ಪತ್ರ ಸಂಖ್ಯೆ: ವಾಕೈ 27 ರೇಯೋವಿ 2007, ದಿನಾಂಕ 24–5–2008 ರಲ್ಲಿ ರೇಷ್ಮೆ ಇಲಾಖೆಯ ಜಮೀನು ಹಾಗೂ ಕಟ್ಟಡಗಳನ್ನು ಇತರೆ ಇಲಾಖೆಗಳಿಗೆ/ಸಂಸ್ಥೆಗಳಿಗೆ ತಾತ್ಕಾಲಿಕವಾಗಿ/ಖಾಯಂ ಆಗಿ ವರ್ಗಾಯಿಸುವ/ಹಸ್ತಾಂತರಿಸುವ ಸಂದರ್ಭದಲ್ಲಿ ವಿಧಿಸಬಹುದಾದ ಷರತ್ತು, ನಿಬಂಧನೆಗಳು ಮತ್ತು ಕರಾರು ಒಪ್ಪಂದದ ಕುರಿತು ಹೊರಡಿಸಿರುವಂತೆ, ರೇಷ್ಮೆ ಅಭಿವೃದ್ಧಿ ಆಯುಕ್ತರು ಹಾಗೂ ರೇಷ್ಮೆ ನಿರ್ದೇಶಕರು ಈ ಪ್ರಕರಣದಲ್ಲಿ ಅಗತ್ಯ ಕ್ರಮ ಕೈಗೊಳ್ಳುವುದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1099

**ಭಾರತಿ ಆರ್. ನಾಯಕ್**
ಪೀಠಾಧಿಕಾರಿ (ರೇಷ್ಮೆ)
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ

## ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವಾಲಯ

**ವಿಷಯ :** ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆಯಡಿ ರಾಮನಗರಂ ಜಿಲ್ಲೆಯ 1 ಜೀತವಿಮುಕ್ತನಿಗೆ ಹಾಗೂ ಮೈಸೂರು ಜಿಲ್ಲೆಯ 10 ಜೀತವಿಮುಕ್ತರಿಗೆ 2008–09ನೇ ಸಾಲಿನಲ್ಲಿ ಸಹಾಯಧನ ಬಿಡುಗಡೆ ಮಾಡುವ ಕುರಿತು.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂ: ಗ್ರಾಅಪ 15 ಆರ್‌ಬಿಎಲ್ 2004, ದಿನಾಂಕ 21–1–2006.
2. ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಯ ಪತ್ರ ಸಂ: ಆರ್‌ಬಿಎಲ್/ಸಿಆರ್/11/07–08, ದಿನಾಂಕ 22–5–07.
3. ಮೈಸೂರು ಜಿಲ್ಲಾಧಿಕಾರಿಯ ಪತ್ರ ಸಂ: ಎಂಎಜಿ(1) ಎಂಎಲ್‌ಓ: 226/2007–08, ದಿನಾಂಕ 10–1–2008.
4. ಸರ್ಕಾರದ ಆದೇಶ ಸಂ: ಗ್ರಾಅಪ 3 ಆರ್‌ಬಿಎಲ್. 2007, ದಿನಾಂಕ 17–3–2008.

**ಪ್ರಸ್ತಾವನೆ :**

ಜೀತಕಾರ್ಮಿಕರನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ನಂತರ, ಅವರುಗಳಿಗೆ ಕನಿಷ್ಠ ಆರ್ಥಿಕ ಸವಲತ್ತನ್ನು ಒದಗಿಸುವ ಉದ್ದೇಶದಿಂದ ರಾಜ್ಯ ಸರ್ಕಾರವು ಜೀತವಿಮುಕ್ತರ ಪುನರ್ವಸತಿ ಸಹಾಯಧನ ಎಂಬ ಹೊಸ ಯೋಜನೆಯನ್ನು ರೂಪಿಸಿದ್ದು, ದಿನಾಂಕ 21–1–2006 ರಿಂದ ಈ ಯೋಜನೆಯನ್ನು ರಾಜ್ಯಾದ್ಯಂತ ಜಾರಿಗೆ ತರಲಾಗಿದೆ. ಈ ಯೋಜನೆಯಡಿ ರೂಪಿಸಿರುವ ನಿರ್ದೇಶನದಂತೆ, ದಿನಾಂಕ 21–1–2006ರ ತರುವಾಯ ಜೀತಪದ್ಧತಿಯಿಂದ ಬಿಡುಗಡೆಗೊಳಿಸುವ ರಾಜ್ಯದ ಪ್ರತಿ ಜೀತ ಕಾರ್ಮಿಕ/ಬಾಲ ಜೀತಕಾರ್ಮಿಕರಿಗೆ ಮಾಹೆಯಾನ ರೂ. 300.00 ರಂತೆ ಸಹಾಯಧನವನ್ನು ಜೀತಪದ್ಧತಿಯಿಂದ ಬಿಡುಗಡೆಗೊಳಿಸಿದ ದಿನದಿಂದ ಮೊದಲ 24 ತಿಂಗಳುಗಳ ಅವಧಿಗೆ ಪಾವತಿಸಬೇಕಾಗುತ್ತದೆ.

2. ಮೇಲೆ ಓದಲಾದ ಕ್ರ.ಸಂ. (4)ರ ಆದೇಶದಲ್ಲಿ ಈ ಯೋಜನೆಯಡಿ ಸಹಾಯಧನ ಒದಗಿಸುವ ಸಲುವಾಗಿ ರಾಮನಗರಂ ಜಿಲ್ಲೆಯ ಮಾಗಡಿ ತಾಲ್ಲೂಕಿನ ಒಬ್ಬ ಜೀತವಿಮುಕ್ತನಿಗೆ 2007–08ನೇ ಸಾಲಿನ 11 ತಿಂಗಳ ಅವಧಿಗೆ (2007 ಮೇ ಇಂದ 2008 ಮಾರ್ಚಿವರೆಗೆ) ಒಟ್ಟು ರೂ. 3300/–ಗಳ ಅನುದಾನವನ್ನು ಹಾಗೂ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ 10 ಜೀತವಿಮುಕ್ತರುಗಳಿಗೆ 2007–08ನೇ ಸಾಲಿನ 5 ತಿಂಗಳ ಅವಧಿಗೆ (2007 ನವೆಂಬರ್ ಇಂದ 2008 ಮಾರ್ಚಿವರೆಗೆ) ಮಾಹೆಯಾನ ರೂ. 300/– ರಂತೆ ಒಟ್ಟು ರೂ. 15000/–ಗಳ ಅನುದಾನವನ್ನು ಬಿಡುಗಡೆ ಮಾಡಲಾಗಿದೆ. ಹಾಲಿ ಪ್ರಸಕ್ತ ಸಾಲಿನ ಆಯವ್ಯಯದಲ್ಲಿ ಜೀತವಿಮುಕ್ತರ ಪುನರ್ವಸತಿ ಯೋಜನೆಗಳಿಗೆ ಒದಗಿಸಿರುವ ಒಟ್ಟಾರೆ ಅನುದಾನ ರೂ. 91.67 ಲಕ್ಷ ಪೈಕಿ ಮೇಲ್ಕಂಡಂತೆ ರಾಮನಗರಂ ಜಿಲ್ಲೆಯ ಒಬ್ಬ ಜೀತವಿಮುಕ್ತನಿಗೆ ಹಾಗೂ ಮೈಸೂರು ಜಿಲ್ಲೆಯ 10 ಜೀತವಿಮುಕ್ತರಿಗೆ 2008–09ನೇ ಸಾಲಿನ 12 ತಿಂಗಳ ಅವಧಿಗೆ (2008 ಏಪ್ರಿಲ್ ಇಂದ 2009 ಮಾರ್ಚಿವರೆಗೆ) ಮಾಹೆಯಾನ ರೂ. 300/– ರಂತೆ ಸಹಾಯಧನಕ್ಕಾಗಿ ತಗಲುವ ರೂ. 3600/–ಗಳ ಅನುದಾನವನ್ನು ರಾಮನಗರಂ ಜಿಲ್ಲಾ ಪಂಚಾಯತಿಗೆ ಹಾಗೂ ರೂ. 36000/– ಗಳ ಅನುದಾನವನ್ನು ಮೈಸೂರು ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿರುತ್ತದೆ. ಅದಕ್ಕಾಗಿ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಗ್ರಾಅಪ 2 ಆರ್‌ಬಿಎಲ್ 2008 ಬೆಂಗಳೂರು, ದಿನಾಂಕ: 3ನೇ ಜುಲೈ 2008.**

ಜೀತವಿಮುಕ್ತರ ಪುನರ್ವಸತಿ ಸಹಾಯಧನ ಯೋಜನೆ ಅಡಿ 2008–09ನೇ ಸಾಲಿನ 12 ತಿಂಗಳ (2008 ಏಪ್ರಿಲ್ ಇಂದ 2009 ಮಾರ್ಚಿವರೆಗೆ) ಅವಧಿಗೆ ಮಾಹೆಯಾನ ರೂ. 300.00 ರಂತೆ ಸಹಾಯ ಧನ ಪಾವತಿಸಲು ರಾಮನಗರಂ ಜಿಲ್ಲೆಯ ಮಾಗಡಿ ತಾಲ್ಲೂಕಿನ ಒಬ್ಬ ಜೀತವಿಮುಕ್ತನ ಬಾಬ್ತು ಒಟ್ಟು ರೂ. 3600.00 (ಮೂರು ಸಾವಿರದ ಆರು ನೂರು ರೂಪಾಯಿಗಳು ಮಾತ್ರ)ಗಳನ್ನು ರಾಮನಗರಂ ಜಿಲ್ಲಾ ಪಂಚಾಯತಿಗೆ ಹಾಗೂ ಮೈಸೂರು ಜಿಲ್ಲೆಯ ಹುಣಸೂರು ತಾಲ್ಲೂಕಿನ 10 ಜೀತವಿಮುಕ್ತರುಗಳ ಬಾಬ್ತು ಒಟ್ಟು ರೂ. 36000.00 (ಮೂವತ್ತಾರು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಮೈಸೂರು ಜಿಲ್ಲಾ ಪಂಚಾಯತಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

2. ಈ ಕಾರ್ಯಕ್ಕಾಗಿ ತಗಲುವ ವೆಚ್ಚವನ್ನು ಲೆಕ್ಕಶೀರ್ಷಿಕೆ 2230–ಕಾರ್ಮಿಕ ಮತ್ತು ಉದ್ಯೋಗ–01–ಕಾರ್ಮಿಕ–198–ಗ್ರಾಮ ಪಂಚಾಯತಿಗಳಿಗೆ ಸಹಾಯ–6–ಗ್ರಾಮ ಪಂಚಾಯತಿಗಳು–ಕೇಂದ್ರ ಪುರಸ್ಕೃತ ಯೋಜನೆ (ಜೀತದಾಳುಗಳ ಪುನರ್ವಸತಿ)–01–ಬ್ಲಾಕ್ ಅನುದಾನ–300–ಒಟ್ಟು ಜಿಲ್ಲಾ ಪಂಚಾಯತಿ (ಯೋಜನೆ)ಗೆ ಜಮಾ ಮಾಡತಕ್ಕದ್ದು.

3. ಸರ್ಕಾರದ ಆದೇಶ ಸಂ: ಗ್ರಾಅಪ 15 ಆರ್‌ಬಿಎಲ್ 2004, ದಿನಾಂಕ 21–1–2006 ರಲ್ಲಿನ ಎಲ್ಲಾ ಮಾರ್ಗಸೂಚಿಗಳನ್ನು ತಪ್ಪದೇ ಪಾಲಿಸತಕ್ಕದ್ದು.

4. ಈ ಆದೇಶವನ್ನು ಇಲಾಖಾ ಆಂತರಿಕ ಆರ್ಥಿಕ ಸಲಹೆಗಾರರ ಸಹಮತಿ ಸಂ. ಗ್ರಾಅಪ 265 ಪಿಬಿಎಸ್ 2008, ದಿನಾಂಕ 23–6–2008ರಂತೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1210

**ಸಿ.ಎಂ. ಶಿರೋಳ್**
ನಿರ್ದೇಶಕರು,
ಯೋಜನೆ ಸಮನ್ವಯ ಹಾಗೂ ಮೌಲ್ಯಮಾಪನ ಘಟಕ
ಹಾಗೂ ಪದನಿಮಿತ್ತ ಸರ್ಕಾರದ ಅಪರ ಕಾರ್ಯದರ್ಶಿ,
ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಇಲಾಖೆ

## ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ

**ವಿಷಯ :** 2008–09ನೇ ಸಾಲಿಗೆ ರಾಜ್ಯದಲ್ಲಿರುವ ವಿವಿಧ ನ್ಯಾಯವಾದಿಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡುವ ಬಗ್ಗೆ–ಆದೇಶ.

**ಓದಲಾಗಿದೆ:** 1. ಸರ್ಕಾರದ ಆದೇಶ ಸಂಖ್ಯೆ ಲಾ 82 ಎಲ್‌ಸಿಎಲ್ 1982 ದಿನಾಂಕ 17/18–3–2003 ಮತ್ತು ತಿದ್ದುಪಡಿ ದಿನಾಂಕ 30–10–1996ರ ಅಧಿಸೂಚನೆ ಸಂಖ್ಯೆ: ಲಾ 112 ಎಲ್‌ಸಿಎಲ್ 1996.

2. ನಿಯಮಗಳ ತಿದ್ದುಪಡಿ ಅಧಿಸೂಚನೆ ಸಂಖ್ಯೆ ಲಾ 120 ಎಲ್‌ಸಿಎಲ್ 2007, ದಿನಾಂಕ 18–2–2008 ಮತ್ತು ಸೇರ್ಪಡೆ ದಿನಾಂಕ 16–5–2008.

**ಪ್ರಸ್ತಾವನೆ :**

ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಕಾನೂನು ಪುಸ್ತಕ ಮತ್ತು ಪೀಠೋಪಕರಣಗಳನ್ನು ಖರೀದಿಸಲು ಸರ್ಕಾರದಿಂದ ಸಹಾಯಾನುದಾನ ನೀಡಲು ದಿ ಕರ್ನಾಟಕ ಗ್ರಾಂಟ್–ಇನ್–ಏಡ್–ಟು–ಬಾರ್ ಅಸೋಸಿಯೇಷನ್ ರೂಲ್ಸ್ 1983ನ್ನು ಮೇಲೆ ಓದಲಾದ ಕ್ರಮಾಂಕ (1)ರ ದಿನಾಂಕ 17/18–3–2003ರಲ್ಲಿ ರಚಿಸಲಾಗಿದೆ ಮತ್ತು ಇದಕ್ಕೆ ಹಂತ ಹಂತವಾಗಿ ತಿದ್ದುಪಡಿ ಮಾಡಲಾಗಿದೆ.

2008–09ನೇ ಸಾಲಿನ ಆಯವ್ಯಯದಲ್ಲಿ ಲೆಕ್ಕಶೀರ್ಷಿಕೆ 2014–00–105–0–01–051 ಸಾಮಾನ್ಯ ವೆಚ್ಚ (ಯೋಜನೇತರ) ಅಡಿಯಲ್ಲಿ ರೂ. 132.03 ಲಕ್ಷಗಳನ್ನು ಒದಗಿಸಿದೆ.

ಮೇಲೆ (2)ರಲ್ಲಿ ಓದಲಾದ ಅಧಿಸೂಚನೆ ದಿನಾಂಕ 18–2–2008 ಮತ್ತು ಸೇರ್ಪಡೆ ದಿನಾಂಕ 16–5–2008ರಲ್ಲಿ ಬಾರ್ ಅಸೋಸಿಯೇಷನ್ಸ್‌ಗಳಿಗೆ ಈ ಹಿಂದೆ ನೀಡಲಾಗುತ್ತಿದ್ದ ಸಹಾಯಾನುದಾನದ ಮೊತ್ತವನ್ನು ಹೆಚ್ಚಿಸಿ ಉಲ್ಲೇಖಿತ (1)ರ ನಿಯಮಗಳಿಗೆ ತಿದ್ದುಪಡಿ ನಿಯಮಗಳನ್ನು ರಚಿಸಲಾಗಿದೆ. ಅದರಂತೆ ಪ್ರಸಕ್ತ ಸಾಲಿಗೆ (2008–09) ಈ ಆದೇಶದ ಅನುಬಂಧದಲ್ಲಿ ಸೂಚಿಸಿರುವಂತೆ ಸರ್ಕಾರವು ವಿವಿಧ ವಕೀಲರ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡಿರುವ

ಮೊತ್ತವನ್ನು ಆಯಾ ಜಿಲ್ಲಾ ವ್ಯಾಪ್ತಿಗೊಳಪಡುವ ಪ್ರಧಾನ/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಸದರಿ ಸಂಘಗಳ ವರದಿಗಳನ್ನು ಪರಿಶೀಲಿಸಿ, ಬಿಡುಗಡೆ ಮಾಡಲು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 76 ಎಲ್‌ಸಿಎಲ್ 2008 ಬೆಂಗಳೂರು, ದಿನಾಂಕ: 6ನೇ ಆಗಸ್ಟ್ 2008.**

ಪ್ರಸ್ತಾವನೆಯನ್ವಯ ರಾಜ್ಯದಲ್ಲಿರುವ ವಿವಿಧ ವಕೀಲರುಗಳ ಸಂಘಗಳಿಗೆ ಸಹಾಯಾನುದಾನ ಬಿಡುಗಡೆ ಮಾಡಲು ಅನುವಾಗುವಂತೆ ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿ ಸೂಚಿಸಿರುವಂತೆ ಸಕ್ಷಮ ಪ್ರಾಧಿಕಾರಗಳಿಗೆ ಒಟ್ಟು ರೂ. 41,35,000/– (ರೂಪಾಯಿ ನಲವತ್ತೊಂದು ಲಕ್ಷದ ಮೂವತ್ತೈದು ಸಾವಿರ ಮಾತ್ರ)ಗಳನ್ನು ಬಿಡುಗಡೆ ಮಾಡಿದೆ.

ಎಲ್ಲಾ ವಿಭಾಗೀಯ, ಜಿಲ್ಲಾ ಮತ್ತು ತಾಲ್ಲೂಕು ಮಟ್ಟದ ನ್ಯಾಯವಾದಿಗಳ ಸಂಘಗಳಿಗೆ ಸಂಬಂಧಟಪ್ಪಂತೆ ಸಕ್ಷಮ ಪ್ರಾಧಿಕಾರಗಳು ಅಂದರೆ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು/ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರುಗಳು ಈ ಆದೇಶದಲ್ಲಿ ಬಿಡುಗಡೆ ಮಾಡಲಾದ ಸಹಾಯಾನುದಾನವನ್ನು ಆಯಾ ನ್ಯಾಯವಾದಿಗಳ ಸಂಘಗಳಿಂದ ಅರ್ಜಿಗಳನ್ನು ಪಡೆದು ಈ ಕೆಳಗೆ ನಿಗದಿಪಡಿಸಲಾಗಿರುವಂತೆ ಆರ್ಥಿಕ ಇಲಾಖೆಯು ಹೊರಡಿಸಿರುವ ಮಾರ್ಗಸೂಚಿ ಅನ್ವಯ ನಿಗಧಿತ ಕಾಲಮಿತಿಯೊಳಗೆ ತ್ವರಿತವಾಗಿ ಮಂಜೂರು ಮಾಡತಕ್ಕದ್ದು ಹಾಗೂ ಸಂಬಂಧಪಟ್ಟ ಖಜಾನೆಗಳಿಗೆ ಬಿಲ್‌ಗಳನ್ನು ಸಲ್ಲಿಸಿ ಹಣ ಪಡೆಯತಕ್ಕದ್ದು.

* ತಾಲ್ಲೂಕು ಮಟ್ಟದ ವಕೀಲರ ಸಂಘ –ರೂ. 20,000/–
* ಜಿಲ್ಲಾ ಮಟ್ಟದ ವಕೀಲರ ಸಂಘ –ರೂ. 35,000/–
* ವಿಭಾಗೀಯ ಮಟ್ಟದ ವಕೀಲರ ಸಂಘ –ರೂ. 50,000/–
* ಬೆಂಗಳೂರು ವಕೀಲರ ಸಂಘ –ರೂ. 1,25,000/–

ಹಿಂದಿನ ಸಾಲಿನಲ್ಲಿ ಸಹಾಯಾನುದಾನ ಪಡೆದಿದ್ದಾಗ್ಯೂ ಸಹಾಯಾನುದಾನ ಬಳಕೆ ಪ್ರಮಾಣ ಪತ್ರವನ್ನು ಸಲ್ಲಿಸದೇ ಇರುವ ವಕೀಲರುಗಳ ಸಂಘಗಳಿಂದ ಉಪಯೋಗಿತ ಪ್ರಮಾಣಪತ್ರ ಪಡೆದು, ಪ್ರಸಕ್ತ ಸಾಲಿನ ಸಹಾಯಾನುದಾನ ಬಿಡುಗಡೆ ಮಾಡುವ ಷರತ್ತಿಗೆ ಈ ಆದೇಶ ಒಳಪಟ್ಟಿದೆ.

ಪ್ರಸಕ್ತ ಆರ್ಥಿಕ ವರ್ಷದ ನಂತರ ಆ ಸಾಲಿನ ಅನುದಾನ ಬಿಡುಗಡೆಗಾಗಿ ಸಲ್ಲಿಸುವ ಅರ್ಜಿಗಳನ್ನು ಪರಿಗಣಿಸಲಾಗದು.

ಈ ಸಹಾಯಾನುದಾನವನ್ನು ಲೆಕ್ಕಶೀರ್ಷಿಕೆ 2014–00–105–0–01–051 ಸಾಮಾನ್ಯ ವೆಚ್ಚಗಳು (ಯೋಜನೇತರ) ಅಡಿಯಲ್ಲಿ ಒದಗಿಸಿರುವ ಅನುದಾನದಿಂದ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 745 ವೆಚ್ಚ–7/2008 ದಿನಾಂಕ 5–7–2008ರಲ್ಲಿ ನೀಡಲಾಗಿರುವ ಸಹಮತಿಯ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಶಕುಂತಲ ಹೆಚ್.ಆರ್.**

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ–2),

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ಸರ್ಕಾರದ ಆದೇಶ ಸಂ: ಲಾ 76 ಎಲ್‌ಸಿಎಲ್ 2008, ದಿನಾಂಕ 6–8–2008**

**ಅನುಬಂಧ**

**ರಾಜ್ಯದಲ್ಲಿನ ವಿವಿಧ ಮಟ್ಟದ ವಕೀಲರ ಸಂಘಗಳಿಗೆ 2008–09ನೇ ಸಾಲಿಗೆ ಬಿಡುಗಡೆ ಮಾಡಬೇಕಾದ ಅನುದಾನದ ವಿವರಗಳು**

| ಕ್ರಮ ಸಂಖ್ಯೆ | ಜಿಲ್ಲೆ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆ ಗೊಳಿಸಬೇಕಾದ ಮೊತ್ತ |
|---|---|---|---|---|
| | | ಜಿಲ್ಲಾ ಮಟ್ಟದ ವಿಭಾಗ ವಕೀಲರು ಸಂಘಗಳು | ತಾಲ್ಲೂಕು ಮಟ್ಟದ ವಕೀಲರ ಸಂಘಗಳು | |
| 1 | 2 | 3 | 4 | 5 |
| 1 | ಬೆಂಗಳೂರು ನಗರ ವಕೀಲರ ಸಂಘ | – | 1 | 1,45,000–00 |

| ಕ್ರಮ ಸಂಖ್ಯೆ | ಜಿಲ್ಲೆ ಹೆಸರು | ವಕೀಲರುಗಳ ಸಂಘಗಳ ಸಂಖ್ಯೆ | | ಬಿಡುಗಡೆ ಗೊಳಿಸಬೇಕಾದ ಮೊತ್ತ |
|---|---|---|---|---|
| 2 | ಬೆಂಗಳೂರು (ಗ್ರಾಮಾಂತರ) | – | 4 | 80,000–00 |
| 3 | ರಾಮನಗರ ಜಿಲ್ಲೆ | 1 | 3 | 95,000–00 |
| 4 | ಕೋಲಾರ | 1 | 6 | 1,55,000–00 |
| 5 | ಚಿಕ್ಕಬಳ್ಳಾಪುರ | 1 | 4 | 1,15,000–00 |
| 6 | ತುಮಕೂರು | 1 | 9 | 2,15,000–00 |
| 7 | ಮೈಸೂರು | 1(ವಿ.ಮ) | 6 | 1,70,000–00 |
| 8 | ಚಾಮರಾಜನಗರ | 1 | 3 | 95,000–00 |
| 9 | ಮಂಡ್ಯ | 1 | 6 | 1,55,000–00 |
| 10 | ಹಾಸನ | 1 | 7 | 1,75,000–00 |
| 11 | ಶಿವಮೊಗ್ಗ | 1 | 6 | 1,55,000–00 |
| 12 | ಚಿಕ್ಕಮಗಳೂರು | 1 | 6 | 1,55,000–00 |
| 13 | ಚಿತ್ರದುರ್ಗ | 1 | 5 | 1,35,000–00 |
| 14 | ದಾವಣಗೆರೆ | 1 | 5 | 1,35,000–00 |
| 15 | ಬಳ್ಳಾರಿ | 1 | 6 | 1,55,000–00 |
| 16 | ಬೆಳಗಾಂ | 1(ವಿ.ಮ) | 11 | 2,70,000–00 |
| 17 | ಬಿಜಾಪುರ | 1 | 4 | 1,15,000–00 |
| 18 | ಬಾಗಲಕೋಟೆ | 1 | 6 | 1,55,000–00 |
| 19 | ಧಾರವಾಡ | 1 | 3 | 95,000–00 |
| 20 | ಹಾವೇರಿ | 1 | 6 | 1,55,000–00 |
| 21 | ಗದಗ್ | 1 | 4 | 1,15,000–00 |
| 22 | ಉತ್ತರ ಕನ್ನಡ | 1 | 10 | 2,35,000–00 |
| 23 | ಬೀದರ್ | 1 | 4 | 1,15,000–00 |
| 24 | ಗುಲ್ಬರ್ಗ | 1(ವಿ.ಮ) | 10 | 2,50,000–00 |
| 25 | ರಾಯಚೂರು | 1 | 4 | 1,15,000–00 |
| 26 | ಕೊಪ್ಪಳ | 1 | 3 | 95,000–00 |
| 27 | ದಕ್ಷಿಣ ಕನ್ನಡ | 1 | 5 | 1,35,000–00 |
| 28 | ಉಡುಪಿ | 1 | 2 | 75,000–00 |
| 29 | ಕೊಡಗು | 1 | 2 | 75,000–00 |
| | **ಒಟ್ಟು** | | | **41,35,000–00** |

**ಶಕುಂತಲ ಹೆಚ್.ಆರ್.**

ಪಿ.ಆರ್.1208

ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ
(ಆಡಳಿತ–2)

**ವಾಣಿಜ್ಯ ಮತ್ತು ಕೈಗಾರಿಕಾ ಸಚಿವಾಲಯ**

**ವಿಷಯ :** ಶ್ರೀ ಪಿ.ಹೆಚ್. ಮುಕುಂದಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ಇವರ ವಿರುದ್ಧ ದಾಖಲಾಗಿರುವ ಅಕ್ರಮ ಆಸ್ತಿ ಹೊಂದಿರುವ ಪ್ರಕರಣದಲ್ಲಿ ಅಭಿಯೋಜನಾ ಮಂಜೂರಾತಿ ಕುರಿತು.

**ಓದಲಾಗಿದೆ:** 1. ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರ ಪತ್ರ ಸಂಖ್ಯೆ: ಲೋಕ್/ಐಎನ್‌ವಿ(ಜಿ)/ಬಿಡಿ–15/ಸಿಆರ್–10/2005/ಟಿಕೆಆರ್ ದಿ: 30–5–2008

2. ತನಿಖಾಧಿಕಾರಿಯವರ ವರದಿ.

3. ತನಿಖಾ ದಾಖಲೆಗಳಾದ ಪ್ರಥಮ ವರ್ತಮಾನ ವರದಿ, ಶೋಧನಾ ಪಂಚನಾಮೆಗಳ, ಸಾಕ್ಷಿದಾರರ ಹೇಳಿಕೆಗಳ ಮತ್ತು ತನಿಖಾಧಿಕಾರಿಯವರ ಅಂತಿಮ ವರದಿಯ ಕಡತಗಳು.

**ಪ್ರಸ್ತಾವನೆ :**

ಶ್ರೀ ಪಿ.ಹೆಚ್. ಮುಕುಂದಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ರವರು ಮೂಲ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವರೆಂದು ತಿಳಿದು ಬಂದ ವಿಶ್ವಾಸಾರ್ಹ ಮಾಹಿತಿಯನ್ವಯ ಇವರ ವಿರುದ್ಧ ಮೊಕದ್ದಮೆ ಸಂಖ್ಯೆ: 10/2005ರಲ್ಲಿ ಪೊಲೀಸ್ ನಿರೀಕ್ಷಕರು, ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ತುಮಕೂರು, ರವರು ಪೊಲೀಸ್ ಠಾಣೆಯಲ್ಲಿ ದಾಖಲಿಸಿರುವ ಪ್ರಕರಣದ ತನಿಖಾಧಿಕಾರಿಯವರ ಅಂತಿಮ ವರದಿ ಓದಲಾದ (2) ಮತ್ತು ತನಿಖಾ ದಾಖಲಾತಿಗಳು ಓದಲಾದ (3)ರಲ್ಲಿ ಮಾನ್ಯ ಅಪರ ಪೊಲೀಸ್ ಮಹಾ ನಿರ್ದೇಶಕರು, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ರವರು ತಮ್ಮ ಪತ್ರ ದಿ: 30–5–2008ರಲ್ಲಿ ಓದಲಾದ (1)ರೊಂದಿಗೆ ಲಂಚ ನಿರೋಧ ಕಾಯ್ದೆ 1988ರ ಕಲಂ 19(1) (ಬಿ)ರ ಅಡಿಯಲ್ಲಿ ಮಂಜೂರಾತಿಗಾಗಿ ಈ ಪ್ರಾಧಿಕಾರವನ್ನು ಕೋರಿರುತ್ತಾರೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಪಿ.ಹೆಚ್. ಮುಕುಂದಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ರವನ್ನು ಐಡಿಜಿಪಿ ಪೊಲೀಸ್ ವಿಭಾಗ, ಕರ್ನಾಟಕ ಲೋಕಾಯುಕ್ತ, ಬೆಂಗಳೂರು, ಇವರು ತಮ್ಮ ಓದಲಾದ (1)ರ ಪತ್ರದ ಸಂಖ್ಯೆ: ಲೋಕ್/ಐಎನ್‌ವಿ (ಜಿ)/ ಬಿಡಿ–15/ಸಿಆರ್–10/2005, ಟಿಕೆಆರ್, ದಿನಾಂಕ: 30–5–2008ರೊಂದಿಗೆ ಕಳುಹಿಸಿಕೊಟ್ಟ ಈ ದಾಖಲಾತಿಗಳನ್ನು ಪರಿಶೀಲಿಸಿದೆ.

1. ಪ್ರಥಮ ವರ್ತಮಾನ ವರದಿ ದಿ: 19–7–2005
2. ಶೋಧನಾ ಪಂಚನಾಮೆಗಳು
   ಎ. ದಿ: 20–7–2005ರಂದು ತುಮಕೂರಿನಲ್ಲಿರುವ ಆರೋಪಿತರ ವಾಸದ ಮನೆಯ ಶೋಧನಾ ಪಂಚನಾಮೆ
   ಬಿ. ದಿ: 20–7–2005ರಂದು ತುಮಕೂರಿನಲ್ಲಿರುವ ತುರುವೇಕೆರೆ ತಾಲ್ಲೂಕಿನ ಶ್ರೀ ರಾಮಣ್ಣನವರ ವಾಸದ ಮನೆಯ ಶೋಧನಾ ಪಂಚನಾಮೆ
   ಸಿ. ದಿ: 20–7–2005ರಂದು ತುಮಕೂರಿನಲ್ಲಿರುವ ತುರುವೇಕೆರೆ ತಾಲ್ಲೂಕಿನ ಶ್ರೀ ವಿಷಕಂಠೇಗೌಡ, ಇವರ ವಾಸದ ಮನೆಯ ಶೋಧನಾ ಪಂಚನಾಮೆ
   ಡಿ. ದಿ: 20–7–2005ರಂದು ತುಮಕೂರಿನಲ್ಲಿರುವ ತುರುವೇಕೆರೆ ತಾಲ್ಲೂಕಿನ ಶ್ರೀ ಚಿಕ್ಕಹೊನ್ನೇಗೌಡರ ವಾಸದ ಮನೆಯ ಶೋಧನಾ ಪಂಚನಾಮೆ
   ಇ. ದಿ: 20–7–2005ರಂದು ತುಮಕೂರು ಟೌನ್, ಜಿಲ್ಲಾ ಕೈಗಾರಿಕಾ ಕೇಂದ್ರದಲ್ಲಿರುವ ಜಂಟಿ ನಿರ್ದೇಶಕರ ಕೊಠಡಿಯಲ್ಲಿ ಮಾಡಿರುವ ಶೋಧನಾ ಪಂಚನಾಮೆ
3. ತನಿಖಾಧಿಕಾರಿಯವರ ಅಂತಿಮ ವರದಿ ದಿ: 19–5–2008
4. ತನಿಖೆಯ ಅಂತಿಮ ವರದಿಯ ಭಾಗಗಳಾದ ಕಡತಗಳು.

**ಕಡತ –I ಸಾಕ್ಷಿಗಳ ಹೇಳಿಕೆಗಳು ಒಟ್ಟು 14**

1. ಶ್ರೀ ಭೀಮಾನಾಯಕ್ ಹಿರಿಯ ಸಹಾಯಕರು, ಪಶ್ಚಿಮ ಶಾಖೆ, ಬೆಸ್ಕಾಂ ಕಛೇರಿ, ಚಿಕ್ಕಪೇಟೆ
2. ಶ್ರೀ ಎನ್. ಗೋಪಾಲಕೃಷ್ಣ, ಮೋಟಾರ್ ವೆಹಿಕಲ್ಸ್ ಇನ್ಸ್‌ಪೆಕ್ಟರ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳ ಕಛೇರಿ, ತುಮಕೂರು

3. ಮೋಹನ್ ಜಿ ಬಿನ್ ಗುಂಡಪ್ಪ, 44 ವರ್ಷ, ಕೃಪಾಸಾಗರಿ, ಸರಸ್ವತಿ ಕಾನ್ವೆಂಟ್ ಹತ್ತಿರ, ಶಿರಾಗೇಟ್, ತುಮಕೂರು.
4. ಶ್ರೀಮತಿ ನಾಗರತ್ನಮ್ಮ, 42 ವರ್ಷ, ಆಡಳಿತಾಧಿಕಾರಿ, ಭಾರತೀಯ ಜೀವ ವಿಮಾ ನಿಗಮ, ಬ್ರಾಂಚ್–2, ಬಿ.ಹೆಚ್. ರಸ್ತೆ, ತುಮಕೂರು.
5. ಶ್ರೀ ರಾಧಾಕೃಷ್ಣ, ಮ್ಯಾನೇಜರ್, ಕೆನರಾ ಬ್ಯಾಂಕ್ ಪ್ರಧಾನ ಕಛೇರಿ, ಅಶೋಕ ರಸ್ತೆ, ತುಮಕೂರು
6. ಶ್ರೀ ಮುರಳಿ ಮೋಹನ್ ಬಿನ್ ಕೃಷ್ಣಪ್ಪ, 40 ವರ್ಷ, ಡೆಪ್ಯೂಟಿ ಮ್ಯಾನೇಜರ್, ಕೆನರಾ ಬ್ಯಾಂಕ್, ಅಶೋಕ ನಗರ ಶಾಖೆ, ಬಿ.ಹೆಚ್. ರಸ್ತೆ, ತುಮಕೂರು.
7. ಶ್ರೀ ಬಿ.ಜಿ. ಶಿವಕುಮಾರ್, ಮ್ಯಾನೇಜರ್, ಎಸ್.ಬಿ.ಎಂ. ಸಿದ್ದಗಂಗಾ ಬಡಾವಣೆ ಶಾಖೆ, ಬಿ.ಹೆಚ್. ರಸ್ತೆ, ತುಮಕೂರು.
8. ಶ್ರೀ ಮೋಹನ್, ಮ್ಯಾನೇಜರ್, ಎಸ್.ಬಿ.ಎಂ. ಶಿರಾಗೇಟ್ ಶಾಖೆ, ಶಿರಾ ರಸ್ತೆ, ತುಮಕೂರು.
9. ಶ್ರೀ ಕುಮಾರ್ ಬಿನ್ ಮುತ್ತುರಾಯಪ್ಪ, 32 ವರ್ಷ, ಮ್ಯಾನೇಜರ್, ಕೆಂಪೇಗೌಡ ಪಟ್ಟಣ, ಸೌಹಾರ್ದ ಸಹಕಾರಿ ಬ್ಯಾಂಕ್ ನಿ., ಕುಣಿಗಲ್ ರಸ್ತೆ, ತುಮಕೂರು
10. ಶ್ರೀ ಕುಮಾರಸ್ವಾಮಿ ಬಿನ್ ಅಮಾವಾಸ್ಯೆ ಗೌಡ, 43 ವರ್ಷ, ವ್ಯವಸ್ಥಾಪಕ ನಿರ್ದೇಶಕರು, ಭೈರವೇಶ್ವರ ಸಹಕಾರ ಬ್ಯಾಂಕ್ ನಿ., ಎಂ.ಎಸ್. ಪುರಂ, ಮುಖ್ಯರಸ್ತೆ, ತುಮಕೂರು.
11. ಶ್ರೀ ಪಿ.ಸಿ. ಸಿಂಗೇಗೌಡ ಅಲಿಯಾಸ್ ಜಯಣ್ಣ, ಬಿನ್ ಲೇಟ್ ಚಲುವೇಗೌಡ, 41 ವರ್ಷ, ಒಕ್ಕಲಿಗರು, ವ್ಯವಸಾಯ, ಬಿ.ಪುರ, ದಬ್ಬೇಘಟ್ಟ ಹೋಬಳಿ, ತುರುವೇಕರೆ ತಾಲ್ಲೂಕು, ತುಮಕೂರು.
12. ಶ್ರೀ ರಾಮದಾಸೇಗೌಡ, ಉಪ ನೋಂದಣಾಧಿಕಾರಿಗಳು, ಉಪ ನೋಂದಣಿ ಇಲಾಖೆ, ತುಮಕೂರು.
13. ಲಕ್ಷ್ಮಿ ನಾರಾಯಣ ಶೆಟ್ಟಿ ಬಿನ್ ನಾರಾಯಣ ಶೆಟ್ಟಿ, ಅಗ್ರಹಾರ ಮುಖ್ಯರಸ್ತೆ, ದಾಸರಹಳ್ಳಿ, ಬೆಂಗಳೂರು.
14. ಶ್ರೀ ಹೆಚ್.ಆರ್. ಸತ್ಯನಾರಾಯಣ ಪ್ರಸಾದ್, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಪ್ರಾದೇಶಿಕ ಸಾರಿಗೆ ಇಲಾಖೆ, ತುಮಕೂರು.

**ಕಡತ-II ಆದಾಯ**

| ಕ್ರ. ಸಂ. | ಆಸ್ತಿಯ ವಿವರ | ಹೊಂದಿರುವವರು | ಹೊಂದಿದ ವರ್ಷ | ಮೌಲ್ಯ | ಷರಾ |
|---|---|---|---|---|---|
| 1 | ಪರಿಶೀಲನಾ ಅವಧಿಯಲ್ಲಿ ಪಡೆದ ನಿವ್ವಳ ಸಂಬಳ | ಮುಕುಂದಕೃಷ್ಣೇಗೌಡ | 1982–05 | 16,70,550–00 | ಪುಟ.76 |
| 2 | ಕೃಷಿ ಆದಾಯ | ಮುಕುಂದಕೃಷ್ಣೇಗೌಡ<br>ಶ್ರೀಮತಿ ಯಶೋಧ | 97–2005 | 6,72,500–00<br>59,000–00 | ಪುಟ.76–79 |
| 3 | ಬಾಡಿಗೆಯಿಂದ ಬಂದ ಆದಾಯ | ಮುಕುಂದಕೃಷ್ಣೇಗೌಡ | 1995–05 | 1,42,688–00 | ಪುಟ.78–80 |
| 4 | ಆರೋಪಿತರ ಪತ್ನಿಗೆ ವಿಭಾಗ ಪತ್ರದ ಮೂಲಕ ಬಂದ ನಿವೇಶನ ಮಾರಾಟ | ಶ್ರೀಮತಿ ಯಶೋಧ | 3–9–04 | 1,26,000–00 | ಪುಟ.80–81 |
| 5 | ಕೆ.ಎಂ. 6 ಎಂ. 3252 ಕಾರಿನ ಮೇಲೆ ಪಡೆದ ಸಾಲ | ಮುಕುಂದಕೃಷ್ಣೇಗೌಡ | 11–4–03 | 1,50,000–00 | ಪುಟ.83 |
| 6 | ಕೆಎಚೆ 7228 ಸ್ಕೂಟರ್ ಮೇಲೆ ಪಡೆದ ಸಾಲ | ಮುಕುಂದಕೃಷ್ಣೇಗೌಡ | 1987 | 10,000–00 | ಪುಟ.84 |
| 7 | ಎಸ್‌ಬಿಎಂ ಖಾತೆ 0119001023 ರಿಂದ ಬಂದ ಬಡ್ಡಿ | ಮುಕುಂದಕೃಷ್ಣೇಗೌಡ | 2005 | 924–00 | ಪುಟ.84–85 |

| ಕ್ರ. ಸಂ. | ಆಸ್ತಿಯ ವಿವರ | ಹೊಂದಿರುವವರು | ಹೊಂದಿದ ವರ್ಷ | ಮೌಲ್ಯ | ಷರಾ |
|---|---|---|---|---|---|
| 8 | ಎಸ್‌ಬಿಎಂ ಖಾತೆ 01190009300 ರಿಂದ ಬಂದ ಬಡ್ಡಿ | ಮುಕುಂದಕೃಷ್ಣೇಗೌಡ | 2005 | 1970–00 | ಪುಟ.85 |
| 9 | ಕೆನರಾ ಬ್ಯಾಂಕ್ ಖಾತೆ 2989ಕ್ಕೆ ಬಂದ ಬಡ್ಡಿ | ಶ್ರೀನಿವಾಸ್ | 2005 | 44–00 | ಪುಟ.85–86 |
| 10 | ಕೆನರಾ ಬ್ಯಾಂಕ್ ಖಾತೆ 53797ಕ್ಕೆ ಬಂದ ಬಡ್ಡಿ | ಮುಕುಂದಕೃಷ್ಣೇಗೌಡ | 2005 | 12,753–00 | ಪುಟ.85–86 |
| 11 | ಮುಕುಂದಕೃಷ್ಣೇಗೌಡರ ಮಗ ಪಡೆದ ಸಂಬಳ | ಶ್ರೀನಿವಾಸ್ | 2000 | 18,000–00 | ಪುಟ.86–87 |
| 12 | ಮನೆ ನಂ. 348 ತುಮಕೂರು ಇಲ್ಲಿ ನಿರ್ಮಾಣ ಮಾಡಲು ಪಡೆದ ಸಾಲ | ಮುಕುಂದಕೃಷ್ಣೇಗೌಡ | 1993 | 3,00,000–00 | ಪುಟ.87 |
| 13 | ವಿಭಾಗ ಪತ್ರದ ಮೂಲಕ ಆಪಾದಿತರ ಪತ್ನಿಗೆ ಬಂದ ಹಣ | ಶ್ರೀಮತಿ ಯಶೋಧ | 14–2–02 | 1,50,000–00 | ಪುಟ.87–88 |
| 14 | ಎನ್.ಎಸ್.ಸಿ. ಯಿಂದ ಬಂದ ಲಾಭ | ಮುಕುಂದಕೃಷ್ಣೇಗೌಡ | 1983 ರಿಂದ 2005 | 1,07,100–00 | ಪುಟ.89–90 |

ಆಪಾದಿತರು ಪರಿಶೀಲನಾ ಅವಧಿಯಲ್ಲಿ ಗಳಿಸಿದ ಆದಾಯ ರೂ. 34,21,529/–

**ಕಡತ–III ಆಸ್ತಿಗಳು**

| ಕ್ರ. ಸಂ. | ಆಸ್ತಿಯ ವಿವರ | ಹೊಂದಿರುವವರು | ಹೊಂದಿದ ವರ್ಷ | ಮೌಲ್ಯ | ಷರಾ |
|---|---|---|---|---|---|
| 1 | ಮನೆ ನಂ. 148 ಟೂಡಾ ಲೇಔಟ್, ಕಾಳಿದಾಸ ನಗರ, ತುಮಕೂರು | ಮುಕುಂದಕೃಷ್ಣೇಗೌಡ | 15–4–93 | 52,840/– | ಪುಟ.40,41 |
| 2 | ಮನೆ ನಂ. 148 ಟೂಡಾ ಲೇಔಟ್, ತುಮಕೂರು ಇಲ್ಲಿ ನಿರ್ಮಾಣ ಮಾಡಿರುವ ಮನೆ | ಮುಕುಂದಕೃಷ್ಣೇಗೌಡ | 1995–96 | 11,05,000/– | ಪುಟ.40,41 |
| 3 | ಬೀಚನಹಳ್ಳಿ ಗ್ರಾಮ, ಸ.ನಂ. 57/5ರಲ್ಲಿ 19 ಗುಂಟೆ ಜಮೀನು | ಶ್ರೀಮತಿ ಯಶೋಧ | 8–1–03 | 56,000/– | ಪುಟ.41 |
| 4 | ಕೆ.ಎ. 06 ಎಂ. 3252 ಮಾರುತಿ ಕಾರು | ಮುಕುಂದಕೃಷ್ಣೇಗೌಡ | 11–4–03 | 2,29,149/– | ಪುಟ.42,43 |
| 5 | ಸಿಕೆಜೆ 7228 ಬಜಾಜ್ ಚೇತಕ್ ಸ್ಕೂಟರ್ | ಮುಕುಂದಕೃಷ್ಣೇಗೌಡ | 10–12–87 | 14,000/– | ಪುಟ. 46 |
| 6 | ಬಜಾಜ್ ಮೋಟಾರ್ ಸೈಕಲ್ ಕೆ.ಎಂ. 6 ಯು 387 | ಶ್ರೀನಿವಾಸ್ (ಮಗ) | 31–3–03 | 40,390/– | ಪುಟ.47 |

| ಕ್ರ. ಸಂ. | ಆಸ್ತಿಯ ವಿವರ | ಹೊಂದಿರುವವರು | ಹೊಂದಿದ ವರ್ಷ | ಮೌಲ್ಯ | ಷರಾ |
|---|---|---|---|---|---|
| 7 | ದೂರವಾಣಿ 2211505 ಠೇವಣಿ | ಮುಕುಂದಕೃಷ್ಣೇಗೌಡ | 27–10–97 | 1,200/– | ಪುಟ.48 |
| 8 | ಆಪಾದಿತರ ಮನೆಯಲ್ಲಿ ದೊರೆತ ಗೃಹೋಪಯೋಗಿ ವಸ್ತುಗಳು | ಮುಕುಂದಕೃಷ್ಣೇಗೌಡ | 1982 ರಿಂದ 2005 | 5,30,240/– | ಪುಟ.49 |
| 9 | ಆಪಾದಿತರ ಮನೆಯಲ್ಲಿ ದೊರೆತ ಚಿನ್ನ 784 ಗ್ರಾಂ | ಮುಕುಂದಕೃಷ್ಣೇಗೌಡ | 1982 ರಿಂದ 2005 | 4,31,464/– | ಪುಟ.49 |
| 10 | ಆಪಾದಿತರ ಮನೆಯಲ್ಲಿ ದೊರೆತ ಬೆಳ್ಳಿ 781 ಗ್ರಾಂ | ಮುಕುಂದಕೃಷ್ಣೇಗೌಡ | 1982 ರಿಂದ 2005 | 8,595/– | ಪುಟ.49 |
| 11 | ಮನೆಯಲ್ಲಿ ದೊರೆತ ನಗದು ಹಣ | ಮುಕುಂದಕೃಷ್ಣೇಗೌಡ | 2005 | 30,500/– | ಪುಟ.49 |
| 12 | ಭೈರವೇಶ್ವರ ಬ್ಯಾಂಕ್ ಠೇವಣಿ ಸಂಖ್ಯೆ: 1964 ಷೇರು ಹಣ | ಮುಕುಂದಕೃಷ್ಣೇಗೌಡ | 21–3–98 | 1,000/–<br>10,000/– | ಪುಟ.50 |
| 13 | ಕೆಂಪೇಗೌಡ ಪಟ್ಟಣ ಸೌಹಾರ್ದ ಬ್ಯಾಂಕ್ 10 ಷೇರುಗಳು ಸಂಖ್ಯೆ: 1907 | ಮುಕುಂದಕೃಷ್ಣೇಗೌಡ, ಯಶೋಧ | 1998–99 | 1,085/–<br>1,085/– | ಪುಟ.50 |
| 14 | ಎಸ್.ಬಿ.ಎಂ. ಶಿರಾ ಗೇಟ್<br>1) ಠೇವಣಿ ನಂ. 01292010222<br>2) ಠೇವಣಿ 01292010449<br>3) ಎಸ್.ಬಿ. ಖಾತೆ 01190010223<br>4) ಎಸ್.ಬಿ. ಖಾತೆ 01190010498 | <br>ಎಂ. ಉಷಾರಾಣಿ, (ಮಗಳು)<br>ಯಶೋಧ<br>ಎಂ. ಉಷಾರಾಣಿ<br>ಯಶೋಧ | <br>16–12–00<br>16–12–00<br>2005<br>2005 | <br>10,000/–<br>60,000/–<br>46,419/–<br>1,33,163/– | ಪುಟ.50–51 |
| 15 | ಎಸ್.ಬಿ.ಎಂ. ಸಿದ್ದಗಂಗಾ ಬಡಾವಣೆ<br>1) ಎಸ್.ಬಿ. 0119009300<br>2) ಠೇವಣಿ 0129201509900 | ಮುಕುಂದಕೃಷ್ಣೇಗೌಡ<br>ಯಶೋಧ | 2005<br>13–3–99 | 93,077/–<br>49,199/– | ಪುಟ.51–52 |
| 16 | ಕೆನರಾ ಬ್ಯಾಂಕ್, ಅಶೋಕ ನಗರ ಶಾಖೆ, ತುಮಕೂರು ಎಸ್.ಬಿ. ಖಾತೆ 4952 | ಶ್ರೀನಿವಾಸ್ (ಮಗ) | 2005 | 45,540/– | ಪುಟ.52 |
| 17 | ಕೆನರಾ ಬ್ಯಾಂಕ್, ತುಮಕೂರು<br>1) ಠೇವಣಿ ಖಾತೆ ನಂ. 21518<br>2) ಎಸ್.ಬಿ. ಖಾತೆ 53797 | <br>ಮುಕುಂದಕೃಷ್ಣೇಗೌಡ<br>ಮುಕುಂದಕೃಷ್ಣೇಗೌಡ | <br>14–7–01<br>2005 | <br>50,000/–<br>2,57,675/– | ಪುಟ.52–53 |
| 18 | ಆಪಾದಿತರ ಮನೆಯಲ್ಲಿ ದೊರೆತ ಎನ್.ಎಸ್.ಸಿ. ಸರ್ಟಿಫಿಕೇಟ್‌ಗಳು | ಮುಕುಂದಕೃಷ್ಣೇಗೌಡ | 2004–05 | 1,55,000/– | ಪುಟ.55 |

ಆರೋಪಿತರು ಪರಿಶೀಲನಾ ಅವಧಿಯಲ್ಲಿ ಗಳಿಸಿರುವ ಒಟ್ಟು ಆಸ್ತಿಯ ಬೆಲೆ ರೂ. 34,11,621–00

**ಕಡತ–IV ಖರ್ಚು**

| ಕ್ರ. ಸಂ. | ಆಸ್ತಿಯ ವಿವರ | ಹೊಂದಿರುವವರು | ಹೊಂದಿದ ವರ್ಷ | ಮೌಲ್ಯ | ಷರಾ |
|---|---|---|---|---|---|
| 1 | ಮನೆ ನಂ. 148 ಟೂಡಾ ಲೇಔಟ್, ಕಾಳಿದಾಸ ನಗರ, ತುಮಕೂರು<br>1) ಮುದ್ರಾಂಕ ಶುಲ್ಕ,<br>2) ಆಸ್ತಿ ತೆರಿಗೆ | ಮುಕುಂದಕೃಷ್ಣೇಗೌಡ | 15–4–93 | 6787–00<br>8525–00 | ಪುಟ.57 |
| 2 | ಸ.ನಂ. 57/5 ಬೀಚನಹಳ್ಳಿ ಗ್ರಾಮ ಮುದ್ರಾಂಕ: | ಶ್ರೀಮತಿ ಯಶೋಧ | 8–1–03 | 7760–00 | ಪುಟ. 55 |
| 3 | ಹಾಸನ ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ನಿವೇಶನಕ್ಕೆ ಸಲ್ಲಿಸಿದ ಹಣ | ಮುಕುಂದಕೃಷ್ಣೇಗೌಡ | 28–3–88 | 500–00 | ಪುಟ.57–58 |
| 4 | ಮೈಸೂರು ನಗರಾಭಿವೃದ್ಧಿ ಪ್ರಾಧಿಕಾರಕ್ಕೆ ನಿವೇಶನಕ್ಕೆ ಸಲ್ಲಿಸಿದ ಹಣ | ಮುಕುಂದಕೃಷ್ಣೇಗೌಡ | 1991 | 5000–00 | ಪುಟ. 58 |
| 5 | ಕೆ.ಎ. 06 ಎಂ. 3252 ಮಾರುತಿ ಕಾರು<br>1) ವಾಹನ ತೆರಿಗೆ<br>2) ಇಂಧನ ಖರ್ಚು<br>3) ವಾಹನ ವಿಮೆ<br>4) ಸಾಲ ಮರುಪಾವತಿ | ಮುಕುಂದಕೃಷ್ಣೇಗೌಡ | 11–4–03 | 21618–00<br>36390–00<br>12166–00<br>42000–00 | ಪುಟ.59–60 |
| 6 | ಸಿಕೆಜೆ 7228 ಬಜಾಜ್ ಚೇತಕ್ ಸ್ಕೂಟರ್<br>1) ಸಾಲ ಮರುಪಾವತಿ<br>2) ನಿರ್ವಹಣಾ ವೆಚ್ಚ | ಮುಕುಂದಕೃಷ್ಣೇಗೌಡ | 10–12–87 | 11806–00<br>68000–00 | ಪುಟ.61 |
| 7 | ಬಜಾಜ್ ಮೋಟಾರ್ ಸೈಕಲ್ ಕೆ.ಎ. 06 ಯು 3871<br>1) ಜೀವಾವಧಿ ತೆರಿಗೆ<br>2) ಇನ್‌ಶುರೆನ್ಸ್<br>3) ನಿರ್ವಹಣಾ ವೆಚ್ಚ | ಶ್ರೀನಿವಾಸ್ (ಮಗ) | 31–3–2003 | 3030–00<br>1073–00<br>1075–00 | ಪುಟ.61–62 |
| 8 | ದೂರವಾಣಿ<br>1) 2211505<br>2) 289401 | ಮುಕುಂದಕೃಷ್ಣೇಗೌಡ | 27–10–97 | 77621–00<br>3886–00 | ಪುಟ.63 |

| ಕ್ರ. ಸಂ. | ಆಸ್ತಿಯ ವಿವರ | ಹೊಂದಿರುವವರು | ಹೊಂದಿದ ವರ್ಷ | ಮೌಲ್ಯ | ಷರಾ |
|---|---|---|---|---|---|
| 9 | ಮಕ್ಕಳ ವಿದ್ಯಾಭ್ಯಾಸದ ಖರ್ಚು | 1)ಲಾವಣ್ಯ (ಮಗಳು)<br>2)ಉಷಾರಾಣಿ (ಮಗಳು)<br>3)ಶ್ರೀನಿವಾಸ್ (ಮಗ) | 95–2004 | 57207–00<br>23479–00<br>155914–00 | ಪುಟ.64–65 |
| 10 | ಗೃಹಪ್ರವೇಶ ಖರ್ಚು | ಮುಕುಂದಕೃಷ್ಣೇಗೌಡ | 9–5–97 | 4000–00 | ಪುಟ.66 |
| 11 | ತನ್ನ ಅಜ್ಜಿ ಚಿಕ್ಕಮ್ಮನವರಿಗೆ ಕಳುಹಿಸಿದ ಎಂ.ಓ. ಹಣ | ಮುಕುಂದಕೃಷ್ಣೇಗೌಡ | 2001–02 | 24000–00 | ಪುಟ.66–67 |
| 12 | ಪಿಯರ್‌ಲೆಸ್ ಪಾಲಿಸಿ 21264498ಕ್ಕೆ ಪಾವತಿಸಿರುವ ಹಣ | ಮುಕುಂದಕೃಷ್ಣೇಗೌಡ | 28–12–85 | 1070–00 | ಪುಟ.67 |
| 13 | ಪಾಸ್‌ಪೋರ್ಟ್‌ಗೆ ಪಾವತಿಸಿದ ಹಣ | ಮುಕುಂದಕೃಷ್ಣೇಗೌಡ | 12–1–05 | 1017–00 | ಪುಟ.67 |
| 14 | ದೇವಸ್ಥಾನಗಳಿಗೆ ನೀಡಿದ ದೇಣಿಗೆ<br>1) ಹೊನ್ನಾದೇವಿ ದೇವಸ್ಥಾನ<br>2) ಇಸ್ಕಾನ್<br>3) ಕುಕ್ಕೆ ಸುಬ್ರಹ್ಮಣ್ಯ | ಮುಕುಂದಕೃಷ್ಣೇಗೌಡ | <br>20–4–02<br>8–8–02<br>20–5–05 | <br>1001–00<br>14444–00<br>5001–00 | ಪುಟ.68 |
| 15 | ಮನೆ ಬಾಡಿಗೆ | ಮುಕುಂದಕೃಷ್ಣೇಗೌಡ | 82–99 | 55710–00 | ಪುಟ.69 |
| 16 | ವೈದ್ಯಕೀಯ ಚಿಕಿತ್ಸೆಗೆ ಪಾವತಿಸಿದ ಹಣ | ಮುಕುಂದಕೃಷ್ಣೇಗೌಡ, ಶ್ರೀಮತಿ ಯಶೋಧ | 2004–05 | 5964–00 | ಪುಟ.70–71 |
| 17 | ವಿದ್ಯುಚ್ಛಕ್ತಿ ಬಿಲ್ಲು | ಮುಕುಂದಕೃಷ್ಣೇಗೌಡ | 97–2005 | 45001–00 | ಪುಟ.71 |
| 18 | ಆಹಾರ ನಿರ್ವಹಣಾ ವೆಚ್ಚ ಅಂಕಿ ಅಂಶ ವಿಭಾಗದವರು ನೀಡಿದಂತೆ | ಮುಕುಂದಕೃಷ್ಣೇಗೌಡ | 1982–05 | 530994–00 | ಪುಟ.71–72 |
| 19 | ಮನೆ ನಿರ್ಮಾಣಕ್ಕೆ ಪಡೆದ ಸಾಲದ ಮರುಪಾವತಿ | ಮುಕುಂದಕೃಷ್ಣೇಗೌಡ | 1995 | 226720–00 | ಪುಟ.72 |
| 20 | ಅಡಿಗೆ ಅನಿಲ | ಮುಕುಂದಕೃಷ್ಣೇಗೌಡ | 2005 | 14000–00 | ಪುಟ.73 |
| 21 | ಎಲ್.ಐ.ಸಿ. ಪಾಲಿಸಿಗಳು<br>1) 632222126<br>2) 632223154<br>3) 614298319<br>4) 634298654<br>5) 632222127<br>6) 614300004<br>7) 722719661 | 1)ಉಷಾರಾಣಿ(ಮಗಳು)<br>–"–<br>–"–<br>–"–<br>ಲಾವಣ್ಯ (ಮಗಳು)<br>–"–<br>ಮುಕುಂದಕೃಷ್ಣೇಗೌಡ | 2000ನೇ ಅಂತ್ಯಕ್ಕೆ ಸ್ವಂತವಾಗಿ ಪಾವತಿಸಿದ ಹಣ | 38922–00<br><br>56312–00<br>18818–00<br>14730–00<br>28427–00<br>17538–00<br>28748–00 | ಪುಟ.51 |

| ಕ್ರ. ಸಂ. | ಆಸ್ತಿಯ ವಿವರ | ಹೊಂದಿರುವವರು | ಹೊಂದಿದ ವರ್ಷ | ಮೌಲ್ಯ | ಷರಾ |
|---|---|---|---|---|---|
| 22 | ಆಪಾದಿತರು ಪಾವತಿಸಿರುವ ಆದಾಯ ತೆರಿಗೆ | ಮುಕುಂದಕೃಷ್ಣೇಗೌಡ | 1999 ರಿಂದ 2005 | 89198–00 | ಪುಟ.73–74 |
| 23 | ಬಾಪೂಜಿ ಹೌಸಿಂಗ್ ಸೊಸೈಟಿಗೆ ಆಪಾದಿತರ ಪತ್ನಿ ಪಾವತಿಸಿರುವ ಹಣ | ಶ್ರೀಮತಿ ಯಶೋಧ | 23–6–04 | 5000–00 | ಪುಟ.75 |

ಆಪಾದಿತ ಮುಕುಂದ ಕೃಷ್ಣೇಗೌಡರು ಪರಿಶೀಲನಾ ಅವಧಿಯಲ್ಲಿ ಮಾಡಿದ ಖರ್ಚು ರೂ. 17,70,452–00.

ತನಿಖಾಧಿಕಾರಿ ಶ್ರೀ ಜೆ.ಬಿ. ರಂಗಸ್ವಾಮಿ, ಪೊಲೀಸ್ ನಿರೀಕ್ಷಕರು, ಕರ್ನಾಟಕ ಲೋಕಾಯುಕ್ತ, ತುಮಕೂರು, ಇವರು ಶ್ರೀ ಪಿ.ಹೆಚ್. ಮುಕುಂದಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ಇವರ ವಿರುದ್ಧ ದಂಡಾರ್ಹ ಪ್ರಕರಣವನ್ನು ತುಮಕೂರು ಲೋಕಾಯುಕ್ತ, ಪೊಲೀಸ್ ಠಾಣೆಯಲ್ಲಿ ಮೊಕದ್ದಮೆ ಸಂಖ್ಯೆ: 10/95ರಲ್ಲಿ ಲಂಚ ನಿರೋಧಕ ಕಾಯ್ದೆ 1988ರ ಕಲಂ 13 (1)(ಇ) ಜೊತೆಯಲ್ಲಿ ಓದಲಾದ ಕಲಂ 13(2)ರ ಅಡಿಯಲ್ಲಿ ದೂರನ್ನು ದಾಖಲಿಸಿಕೊಂಡಿರುತ್ತಾರೆ.

ಮೇಲ್ಕಂಡಂತೆ ಪ್ರಕರಣವನ್ನು ದಾಖಲಿಸಿದ ನಂತರ, ಈ ಕೆಳಕಂಡ ತನಿಖಾಧಿಕಾರಿಗಳು ಪ್ರಕರಣದ ತನಿಖೆ ಮುಂದುವರೆಸಿರುತ್ತಾರೆ.

1. ಶ್ರೀ ಜೆ.ಬಿ. ರಂಗಸ್ವಾಮಿ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ತುಮಕೂರು.
2. ಶ್ರೀ ಡಿ.ಎಸ್. ರಾಜೇಂದ್ರ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಜಿಲ್ಲೆ.
3. ಶ್ರೀ ಆರ್.ಸಿ. ಲೋಕೇಶ್ ಕುಮಾರ್, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಬೆಂಗಳೂರು ನಗರ ಜಿಲ್ಲೆ.
4. ಶ್ರೀ ಎನ್.ಟಿ. ಅಶ್ವಥ್ ನಾರಾಯಣ, ಪೊಲೀಸ್ ಇನ್ಸ್‌ಪೆಕ್ಟರ್, ಕರ್ನಾಟಕ ಲೋಕಾಯುಕ್ತ, ಕೋಲಾರ ಜಿಲ್ಲೆ.

ದಿ: 20–7–2005ರಂದು ಪಂಚ ಸಾಕ್ಷಿಗಳ ಸಮಕ್ಷಮ ಶೋಧಿಸಿರುತ್ತಾರೆ. ಈ ಸಂದರ್ಭದಲ್ಲಿ ಬರೆಯಲಾದ ಶೋಧನಾ ಮಹಜರ್‌ಗಳ ಪ್ರಕಾರ ಆಪಾದಿತರ ಚರ ಮತ್ತು ಸ್ಥಿರಾಸ್ತಿ ಅಂದರೆ ಗೃಹೋಪಯೋಗಿ ಉಪಕರಣಗಳು, ಚಿನ್ನ ಮತ್ತು ಬೆಳ್ಳಿ, ಬ್ಯಾಂಕ್ ಡಿಪಾಸಿಟ್‌ಗಳು, ವಾಹನಗಳು, ನಿವೇಶನಗಳು ಹಾಗೂ ಜಮೀನು ಇವುಗಳನ್ನೊಳಗೊಂಡಂತೆ ಆಸ್ತಿಗಳು ಮತ್ತು ಇವುಗಳಿಗೆ ಸಂಬಂಧಿಸಿದ ದಾಖಲೆಗಳು ಪತ್ತೆಯಾಗಿರುತ್ತದೆ.

ಸದರಿ ಪ್ರಕರಣದ ತನಿಖೆಯು ಪೂರ್ಣಗೊಂಡ ನಂತರ ಆಪಾದಿತ ಸರ್ಕಾರಿ ಅಧಿಕಾರಿ ಶ್ರೀ ಪಿ.ಹೆಚ್. ಮುಕುಂದ ಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ಇವರು ದಿ: 16–8–1982 ರಿಂದ ದಿನಾಂಕ: 20–7–2005ರವರೆಗಿನ "ಚೆಕ್ ಪಿರಿಯಡ್" ನಲ್ಲಿ ಒಟ್ಟು ರೂ. 34,11,621/– (ರೂಪಾಯಿ ಮೂವತ್ನಾಲ್ಕು ಲಕ್ಷದ ಹನ್ನೊಂದು ಸಾವಿರದ ಆರುನೂರ ಇಪ್ಪತ್ತೊಂದು ಮಾತ್ರ)ಗಳ ಆಸ್ತಿಯನ್ನು ಹೊಂದಿರುತ್ತಾರೆಂದು ಮತ್ತು ಈ ಅವಧಿಯಲ್ಲಿ ಆಪಾದಿತರು ತಮ್ಮ ಮತ್ತು ತಮ್ಮ ಕುಟುಂಬದ ಸದಸ್ಯರಿಗಾಗಿ ಮಾಡಿರುವ ಒಟ್ಟು ಖರ್ಚು ರೂ. 17,70,452/– (ರೂಪಾಯಿ ಹದಿನೇಳು ಲಕ್ಷದ ಎಪ್ಪತ್ತು ಸಾವಿರದ ನಾಲ್ಕು ನೂರ ಐವತ್ತೆರಡು ಮಾತ್ರ)ಗಳಾಗಿದ್ದು, ಆಪಾದಿತರು ಈ ಅವಧಿಯಲ್ಲಿ ಎಲ್ಲಾ "ಬಲ್ಲ ಮೂಲ" ಗಳಿಂದ ಗಳಿಸಿರುವ ಆದಾಯವು ರೂ. 34,21,529/– (ರೂಪಾಯಿ ಮೂವತ್ನಾಲ್ಕು ಲಕ್ಷದ ಇಪ್ಪತ್ತೊಂದು ಸಾವಿರದ ಐದು ನೂರ ಇಪ್ಪತ್ತೊಂಭತ್ತು ಮಾತ್ರ) ಗಳಾಗಿರುತ್ತದೆ ಎಂದು ಕಂಡು ಬಂದಿರುತ್ತದೆ. ಆಪಾದಿತರ ಆಸ್ತಿ ಮತ್ತು ಖರ್ಚಿನ ಒಟ್ಟು ಮೊತ್ತ ರೂ. 51,82,073/– (ರೂಪಾಯಿ ಐವತ್ತೊಂದು ಲಕ್ಷದ ಎಂಭತ್ತೆರಡು ಸಾವಿರದ ಎಪ್ಪತ್ತ್ಮೂರು ಮಾತ್ರ) ಗಳಾಗಿದ್ದು, ಹೆಚ್ಚಿನ ಪ್ರಮಾಣದ ಆಸ್ತಿಯ ಮೊತ್ತವು ರೂ. 17,33,544/– (ರೂಪಾಯಿ ಹದಿನೇಳು ಲಕ್ಷದ ಮೂವತ್ಮೂರು ಸಾವಿರದ ಐದು ನೂರ ನಲವತ್ನಾಲ್ಕು ಮಾತ್ರ) ಗಳಾಗಿರುತ್ತದೆ. ಅಂದರೆ, ಆಪಾದಿತ ಸಾರ್ವಜನಿಕ ನೌಕರ ಶೇ. 50.66 ರಷ್ಟು ತಮ್ಮ ಬಲ್ಲ ಮೂಲಗಳಿಗಿಂತಲೂ ಹೆಚ್ಚಿನ ಪ್ರಮಾಣದ ಆಸ್ತಿಯನ್ನು ಹೊಂದಿರುವುದು ಕಂಡು ಬಂದಿರುತ್ತದೆ. ಇದಕ್ಕೆ ಆಪಾದಿತರ ಬಳಿ ಯಾವುದೇ ಸಮಾಧಾನಕರ ವಿವರಣೆ ಅಥವಾ ಲೆಕ್ಕ ಲಭ್ಯವಿರುವುದಿಲ್ಲ.

ಆದ್ದರಿಂದ, ಶ್ರೀ ಪಿ.ಹೆಚ್. ಮುಕುಂದಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ಇವರು ಲಂಚ ನಿರೋಧಕ ಕಾಯ್ದೆ, 1988ರ ಕಲಂ 13(1)(ಇ)ರ ಜೊತೆ ಕಲಂ 13 (2)ರ ಅಡಿಯಲ್ಲಿ ಅಪರಾಧ ಎಸಗಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ.

ಆಪಾದಿತ ಸರ್ಕಾರಿ ನೌಕರರು ತಮ್ಮ "ಬಲ್ಲ ಮೂಲ" ಗಳ ಆದಾಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಆಸ್ತಿಯನ್ನು ಗಳಿಸಿ ಅಪರಾಧಿಕ ದುರ್ನಡತೆ ಎಸಗಿರುವುದರಿಂದ ಸದರಿಯವರನ್ನು ಸಾರ್ವಜನಿಕ ಹಿತದೃಷ್ಟಿಯಿಂದ ನ್ಯಾಯಾಲಯದಲ್ಲಿ ಅಭಿಯೋಜನೆಗೊಳಿಸುವುದು ಅತ್ಯವಶ್ಯಕ.

ಆಪಾದಿತರು ಲಂಚ ನಿರೋಧಕ ಕಾಯ್ದೆ, 1988ರ ಕಲಂ 13(1)(ಇ)ರ ಜೊತೆಗೆ ಓದಲಾದ ಕಲಂ 13(2)ರ ಅಡಿಯಲ್ಲಿ ಶಿಕ್ಷಾರ್ಹ ಅಪರಾಧ ಎಸಗಿರುವುದು ಸರ್ಕಾರಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿದೆ. ಇವರನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 13(1)(ಇ)ರ ಜೊತೆ ಕಲಂ 13(2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸುವುದು ಅವಶ್ಯ ಎಂದು ಸರ್ಕಾರವು ಮನಗಂಡಿರುತ್ತದೆ.

ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಆಪಾದಿತರನ್ನು ಕೆಲಸದಿಂದ ತೆಗೆದು ಹಾಕಲು ಅಧಿಕಾರ ಹೊಂದಿರುತ್ತದೆ. ಆದ್ದರಿಂದ, ಲಂಚ ನಿರೋಧಕ ಕಾಯ್ದೆ, 1988ರ ಕಲಂ 19(1) (ಬಿ)ರ ಅಡಿ ಆಪಾದಿತ ನೌಕರರಾದ ಶ್ರೀ ಪಿ.ಹೆಚ್. ಮುಕುಂದ ಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ರವರನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 13(1)(ಇ)ರ ಜೊತೆ ಕಲಂ 13 (2)ರ ಅಡಿಯಲ್ಲಿ ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿ ನೀಡುವ ಅಧಿಕಾರವನ್ನು ಸರ್ಕಾರವು ಹೊಂದಿದ್ದು, ಅದರಂತೆ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ವಾಕೈ 112 ಕೈಸೇವಿ 2008, ಬೆಂಗಳೂರು, ದಿನಾಂಕ: 11ನೇ ಆಗಸ್ಟ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ, ಆಪಾದಿತ ಸರ್ಕಾರಿ ಅಧಿಕಾರಿಯಾದ ಶ್ರೀ ಪಿ.ಹೆಚ್. ಮುಕುಂದಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ಇವರನ್ನು ಹುದ್ದೆಯಿಂದ ತೆಗೆದು ಹಾಕುವ ಅಧಿಕಾರವುಳ್ಳ ಸಕ್ಷಮ ಪ್ರಾಧಿಕಾರವಾದ ಸರ್ಕಾರವು ಶ್ರೀ ಪಿ.ಹೆಚ್. ಮುಕುಂದಕೃಷ್ಣೇಗೌಡ, ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರ, ತುಮಕೂರು, ಇವರನ್ನು ಲಂಚ ನಿರೋಧಕ ಕಾಯ್ದೆ, 1988ರ ಕಲಂ 13(1)(ಇ)ರ ಜೊತೆಗೆ ಓದಲಾದ ಕಲಂ 13(2)ರ ಪ್ರಕಾರ ಶಿಕ್ಷಾರ್ಹ ಅಪರಾಧಕ್ಕಾಗಿ ಅಭಿಯೋಗಗೊಳಿಸಲು ಈ ಮೂಲಕ ಮಂಜೂರಾತಿಯನ್ನು ನೀಡಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1176

**ಬಿ.ಸಿ. ಪ್ರಕಾಶ್**
ಸರ್ಕಾರದ ಅಧೀನ ಕಾರ್ಯದರ್ಶಿ,
ವಾಣಿಜ್ಯ ಮತ್ತು ಕೈಗಾರಿಕಾ ಇಲಾಖೆ (ಸೇವೆಗಳು)

## ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಸಚಿವಾಲಯ

**ವಿಷಯ :** ಶ್ರೀಗಂಧ ಬೆಳೆಯುವುದನ್ನು ಉತ್ತೇಜಿಸಲು ಮತ್ತು ಸಂರಕ್ಷಿಸಲು ವಿಶೇಷ ಯೋಜನೆಗೆ ಅನುಮೋದನೆ ನೀಡುವ ಕುರಿತು.

**ಓದಲಾಗಿದೆ:** ಪ್ರಧಾನ ಮುಖ್ಯ ಅರಣ್ಯ, ಸಂರಕ್ಷಣಾಧಿಕಾರಿ, ಬೆಂಗಳೂರು ಇವರ ಪತ್ರ ಸಂಖ್ಯೆ: ಡಿ1/ಬಿಯುಡಿ/ಸಿಆರ್ / 2008–09, ದಿನಾಂಕ 15–8–2008 ಮತ್ತು ಡಿ–1/ಬಿಯುಡಿ/ಸಿಆರ್–123/2008–09, ದಿನಾಂಕ 13–8–2008.

**ಪ್ರಸ್ತಾವನೆ :**

2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಶ್ರೀಗಂಧ ಬೆಳೆಯುವುದನ್ನು ಉತ್ತೇಜಿಸಲು ಮತ್ತು ಸಂರಕ್ಷಿಸಲು ವಿಶೇಷ ಯೋಜನೆಯನ್ನು ಆರಂಭಿಸಲು ರೂ. 2.00 ಕೋಟಿಗಳನ್ನು ಒದಗಿಸಲಾಗಿದೆಯೆಂದು ಘೋಷಿಸಲಾಗಿದೆ.

ಕರ್ನಾಟಕ ರಾಜ್ಯವು ಶ್ರೀಗಂಧದ ನಾಡೆಂದು ಹೆಸರು ವಾಸಿಯಾಗಿದ್ದರೂ ಸಹಾ ಇತ್ತೀಚಿನ ವರ್ಷಗಳಲ್ಲಿ ಶ್ರೀಗಂಧ ಕಳ್ಳತನದಿಂದ ನಶಿಸಿ ಹೋಗುತ್ತಿದೆ. ಶ್ರೀಗಂಧ ಅವಲಂಬಿತ ಗುಡಿ ಕೈಗಾರಿಕಾ ಸಂಸ್ಥೆಗಳು, ಶ್ರೀಗಂಧದ ಎಣ್ಣೆ ಕಾರ್ಖಾನೆಗಳು

ಮತ್ತು ಔಷಧಿ ಹಾಗೂ ಪೂಜೆ ಪುರಸ್ಕಾರಗಳಿಗೆ ಬೇಕಾದ ಶ್ರೀಗಂಧವನ್ನು ಪೂರೈಸಲು ಇಲಾಖೆಗೆ ಕಷ್ಟಕರವಾಗಿದೆ. ಇದಕ್ಕಾಗಿ ಶ್ರೀಗಂಧ ಯಥೇಚ್ಛವಾಗಿ ಬೆಳೆಯುತ್ತಿರುವ ಪ್ರದೇಶಗಳಲ್ಲಿರುವ ಸ್ವಾಭಾವಿಕವಾಗಿ ಬೆಳೆದು ಬರುತ್ತಿರುವ ಶ್ರೀಗಂಧದ ಗಿಡಗಳ ಮತ್ತು ಈಗಾಗಲೇ ಅರಣ್ಯ ಇಲಾಖೆ ಬೆಳೆಸಲಾದ ಶ್ರೀಗಂಧದ ನೆಡುತೋಪುಗಳ ಪಾಲನೆ, ಪೋಷಣೆ ಮತ್ತು ರಕ್ಷಣೆಗೆ ಹಾಗೂ ಅಭಿವೃದ್ಧಿ ಮಾಡುವುದರ ಹಾಗೆಯೇ ಹೊಸ ನೆಡುತೋಪುಗಳನ್ನು ಮಾಡಬೇಕಾಗಿದೆ. ಜೊತೆಗೆ ರೈತರು ತಮ್ಮ ಜಮೀನುಗಳಲ್ಲಿ ಶ್ರೀಗಂಧದ ಸಸಿಗಳು ಬೆಳೆಸಲು ಬೇಕಾದ ಸಸಿಗಳನ್ನು ಅರಣ್ಯ ಇಲಾಖೆ ಒದಗಿಸಬೇಕಾಗಿದೆ. ರಾಜ್ಯ ಸರ್ಕಾರ 2008–09ನೇ ಸಾಲಿಗೆ ಶ್ರೀಗಂಧದ ಅಭಿವೃದ್ಧಿ ಯೋಜನೆಗಾಗಿ ರೂ. 2.00 ಕೋಟಿಗಳನ್ನು ಒದಗಿಸಿದ್ದು, ಇದಕ್ಕಾಗಿ ಸುಮಾರು 100 ಹೆಕ್ಟೇರ್ ಪ್ರದೇಶಗಳಲ್ಲಿ ಶ್ರೀಗಂಧದ ನೆಡುತೋಪುಗಳ ಪಾಲನೆ, ಪೋಷಣೆ ಮತ್ತು ಅತಿ ಮುಖ್ಯವಾಗಿ ರಕ್ಷಣೆ ನೀಡಲು ಯೋಜನೆಯನ್ನು ರೂಪಿಸಲಾಗಿದೆ. ಈ ನೆಡುತೋಪುಗಳಿಗೆ ಚೈನ್‌ಲಿಂಕ್ ಮೆಶ್ ಬೇಲಿ, ನೆಡುತೋಪಿಗೆ ಕಾವಲುಗಾರರ ನೇಮಕ, ಶ್ರೀಗಂಧ ಸಸಿಗಳ ನೆಡುವುದು, ಶ್ರೀಗಂಧದ ಬೀಜ ಬಿತ್ತುವುದು. ಹಾಲಿ ಇರುವ ಶ್ರೀಗಂಧದ ಗಿಡಗಳಿಗೆ ಮಣ್ಣು ಕೆಲಸ, ಗೊಬ್ಬರ ಹಾಕುವುದು, ಮುಂತಾದ ಕಾಮಗಾರಿಗಳ ಅನುಷ್ಠಾನಕ್ಕಾಗಿ ರೂ. 200.00 ಲಕ್ಷಗಳ ಯೋಜನೆಗೆ ಅನುಮೋದನೆ ನೀಡಿ, ಯೋಜನಾ ಲೆಕ್ಕಶೀರ್ಷಿಕೆ 2406–01–101–2–24-Cultivation of Sandalwood Trees-059-Other Expenditure ರಡಿ ಒದಗಿಸಿರುವ ರೂ. 200.00 ಲಕ್ಷಗಳಲ್ಲಿ ಮೊದಲ ಕಂತಾಗಿ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಬೇಕೆಂದು ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರು ಕೋರಿರುತ್ತಾರೆ.

ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಯವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದ್ದು, 2008–09ನೇ ಸಾಲಿನ ಆಯವ್ಯಯ ಭಾಷಣದಲ್ಲಿ ಘೋಷಿಸಿರುವಂತೆ ಶ್ರೀಗಂಧ ಬೆಳೆಯುವುದನ್ನು ಉತ್ತೇಜಿಸಲು ಮತ್ತು ಸಂರಕ್ಷಿಸಲು ವಿಶೇಷ ಯೋಜನೆಯನ್ನು ರೂ. 200.00 ಲಕ್ಷಗಳಲ್ಲಿ ಅನುಷ್ಠಾನಗೊಳಿಸಲು ಅನುಮೋದನೆ ನೀಡಿ, ಮೊದಲ ಕಂತಾಗಿ ರೂ. 100.00 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರವು ನಿರ್ಧರಿಸಿರುವ ಕಾರಣ, ಈ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಅಪಜೀ 137 ಎಫ್‌ಎಪಿ 2008, ಬೆಂಗಳೂರು, ದಿನಾಂಕ: 4ನೇ ನವೆಂಬರ್ 2008.**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ 2008–09ನೇ ಸಾಲಿನಲ್ಲಿ ಶ್ರೀಗಂಧ ಬೆಳೆಯುವುದನ್ನು ಉತ್ತೇಜಿಸಲು ಮತ್ತು ಸಂರಕ್ಷಿಸಲು ವಿಶೇಷ ಯೋಜನೆಯನ್ನು ರೂ. 200.00 ಲಕ್ಷಗಳಲ್ಲಿ ಅನುಷ್ಠಾನಗೊಳಿಸಲು ಆಡಳಿತಾತ್ಮಕ ಅನುಮೋದನೆ ನೀಡಿ, ಮೊದಲ ಕಂತಾಗಿ ರೂ. 100.00 ಲಕ್ಷ (ಒಂದು ನೂರು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ಈ ಕೆಳಕಂಡ ಷರತ್ತುಗಳ ಮೇಲೆ ಪ್ರಧಾನ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿಗಳಿಗೆ ಬಿಡುಗಡೆ ಮಾಡಿದೆ.

1) ಮುಂಗಡ ಪತ್ರದಲ್ಲಿನ ಕಮಿಟ್‌ಮೆಂಟ್ (Commitment)ನ್ನು ಗಮನದಲ್ಲಿಟ್ಟುಕೊಂಡು ಇನ್ನು ಮುಂದೆ ಇಲಾಖೆಯು ಉದ್ದೇಶಿತ ಧ್ಯೇಯಗಳನ್ನು ನಿಗದಿತ ಅವಧಿಯೊಳಗೆ ತಲುಪುವ ನಿಟ್ಟಿನಲ್ಲಿ ಒಂದು ದೀರ್ಘಾವಧಿ ಯೋಜನೆಯನ್ನು ರೂಪಿಸತಕ್ಕದ್ದು.
2) ಈ ಯೋಜನೆಯು ವಾರ್ಷಿಕ ಯೋಜನೆಗಳೊಂದಿಗೆ ಒಳಗೊಂಡಿರತಕ್ಕದ್ದು. ಈ ಅವಧಿ ಮುಗಿದ ಕೂಡಲೇ ಗುರಿಗಳ ಪ್ರಗತಿ ಸಾಧಿಸಿದೆಯೇ ಎಂಬ ಬಗ್ಗೆ ಮೌಲ್ಯಮಾಪನ ಮಾಡತಕ್ಕದ್ದು.
3) ಈ ಯೋಜನೆಯನ್ನು ಪ್ರಸಕ್ತ ಸಾಲಿನ ಆರ್ಥಿಕ ವರ್ಷದಲ್ಲಿ ಅನುಷ್ಠಾನಗೊಳಿಸಿದ್ದಲ್ಲಿ, ಮುಂದಿನ ವರ್ಷದ ಅಂದರೆ, 2009–2010ನೇ ಸಾಲಿನ ಅನುದಾನವನ್ನು ಹಂಚಿಕೆ ಮಾಡಲಾಗುವುದು.

ಈ ಆದೇಶವನ್ನು ಯೋಜನಾ ಇಲಾಖೆಯ ಟಿಪ್ಪಣಿ ಸಂ: ಪಿಡಿ 36 ಪಿಎಫ್‌ಓ 2008, ದಿನಾಂಕ 5–9–2008 ಮತ್ತು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಎಫ್‌ಡಿ 381 ವೆಚ್ಚ–2/2008, ದಿನಾಂಕ 22–9–2008ರ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್.1578

**ಹೆಚ್.ಎಂ. ಮಲ್ಲಿಕಾರ್ಜುನಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ